# ಶ್ರೀ ಕನ್ಯಕಾ ಪರಮೇಶ್ವರಿ
# ಅಮೃತ ಚರಿತ್ರೆ


ಸಂಗ್ರಹ

ಕೆ. ರಾಜಲಕ್ಷ್ಮೀ ಗೋಪಾಲ್, ಎಂ.ಎ., ಬಿ.ಎಡ್.

ಕೊಡುಗೆ

ಕೆ. ಆರ್. ಗೋಪಾಲ್



ಪ್ರಕಟಣೆ

ಶ್ರೀ ವಾಸವಿ ಕ್ಷೇತ್ರ, ಗಿರಿನಗರ, 2ನೇ ಹಂತ

ಬೆಂಗಳೂರು - 560 085

ಶ್ರೀ ಕನ್ಯಕಾ ಪರಮೇಶ್ವರಿ ಅಮೃತ ಚರಿತ್ರೆ
ನಾದ ಪ್ರಕಾಶನ, ನಂ. 418, 8ನೇ ಮುಖ್ಯರಸ್ತೆ
ಆವಲಹಳ್ಳಿ ಬಿ.ಡಿ.ಎ. ಬಡಾವಣೆ, ಬನಶಂಕರಿ 3ನೇ ಹಂತ
ಬೆಂಗಳೂರು - 560 085. ದೂರವಾಣಿ: 080-2675 2827
ಸಂಪರ್ಕ ಸಮಯ: ಬೆಳಿಗ್ಗೆ 7.00 ರಿಂದ 9.00 ಮತ್ತು ರಾತ್ರಿ 9.00ರ ನಂತರ



ಮೊದಲ ಮುದ್ರಣ:
ಕನ್ಯಕಾ ಪರಮೇಶ್ವರಿ ಜಯಂತಿ, 1-5-2012

ಪ್ರತಿಗಳು: 2000

ಪುಟಗಳು: 40

ಅಕ್ಷರ ಜೋಡಣೆ ಮತ್ತು ಮುದ್ರಣ:
ಗಾಯತ್ರಿ ಪ್ರಿಂಟ್ಸ್, 232/4, 4ನೇ ಮುಖ್ಯರಸ್ತೆ
ಶ್ರೀನಿವಾಸನಗರ, ಬನಶಂಕರಿ 1ನೇ ಹಂತ
ಬೆಂಗಳೂರು-560 050

# ಪ್ರಾರ್ಥನೆ

ರಾಗ: ಶ್ರೀ, ಏಕತಾಳ

1. ವಾಸವಾಂಬಾ ನಾ। ನಿನ್ನ ಪೂಜಿಸುವೆ ಎನ್ನ ಮೇಲೆ। ಮನಸು ಇರಬಾರದೇ ಅಂಬಾ। ನಿನ್ನ ಮನಸ್ಸು ಇರಬಾರದೆ ಅಂಬಾ॥ಪ॥ ಅರಿಶಿನ ಕುಂಕುಮ ಪೂಜಿಸಿ ನಿನಗೆ। ಅರೆದು ಕೇಸರಿಗಂಧ ಲೇಪಿಸಿ॥ ಹಸನಾದ ಫಲಪುಷ್ಪ ಅರ್ಪಿಸಿ ನಿನಗೆ। ತಾಂಬೂಲ ಇತ್ತು ಆರತಿ ಎತ್ತಿ॥1॥ ನೀರಜ ದಳನೇತ್ರೆ ಕೋರಿದ ವರವೀವೆ। ನಮ್ಮಯ ಕಷ್ಟವ ನಿಮಿಷದಿ ಪರಿಹರಿಸೈ॥ ಬಂಗಾರದ ಮಂಟಪದಿ ಬಂದು ನೀ ಕುಳಿತು। ಸರಸದಿ ಎಮ್ಮನು ಸಲಹು ನೀ ತಾಯೆ॥2॥ ಮಾಡಿದಪರಾಧಗಳ ಮರೆತು ನೀ ಪೊರೆಯುವೆ। ನೀರೆ ನಿನ್ನಯ ಪಾದ ಸೇವೆ ಮಾಡುವೆನು॥ ಪಂಚಾಮೃತ, ಗಂಧೋದಕ, ಅಕ್ಷತೆ, ಪುಷ್ಪ। ಚಂದದ ಧೂಪ, ದೀಪ, ನೈವೇದ್ಯ ನಿವೇದಿಸಿ॥3॥ ಜಗಕೆ ಜನನಿಯು ನೀನಾಗಿರುವೆ। ಹಗಲಿರುಳು ನಿನ್ನ ಪೂಜಿಪೆನು॥ ಸರ್ವಾಭರಣದಿ ಅಲಂಕೃತಳಾಗಿ। ಕಲಶದಿ ನೆಲೆಸಿ ಹರಸು ನೀ ತಾಯೆ॥4॥

ರಾಗ: ಕಲ್ಯಾಣಿ, ಏಕತಾಳ

2. ವಾಸವಿ ಜಗದೀಶ್ವರಿ ಕರುಣಾಕರಿ ದಯಾಕರಿ॥ಪ॥ ಪಾಹಿಮಾಂ ಅಮರೇಶ್ವರಿ ಪೆನುಗೊಂಡ ಪುರಾಧೀಶ್ವರಿ॥ಅ.ಪ॥ ಧರ್ಮವರ್ಧಿನಿ ಸತ್ಯಸಂದಿನಿ ಭಕ್ತಜನ ಪರಿಪಾಲಿನಿ। ಪಾಹಿಮಾಂ ಸುಖದಾಯಿನಿ ಅಭಿಮಾನಿನಿ ಕಾತ್ಯಾಯಿನಿ॥1॥ ಅರಿಭಯಂಕರಿ ಮದನ ಸುಂದರಿ ವೈಶ್ಯಕುಲ ಹೃದಯೇಶ್ವರಿ। ರಕ್ಷಮಾಂ ಸುಮನೋಹರಿ ಜಯ ಕನ್ಯಕಾ ಪರಮೇಶ್ವರಿ॥2॥ ವಿಶ್ವ ವಂದಿತೆ ವಿಶ್ವ ರಂಜಿತೆ ವಿಶ್ವಮಾತೆ ಸುಪೂಜಿತೆ। ಶಾರದೇನುತೆ ಜಗದ್ವಿಖ್ಯಾತೆ ಸುವ್ರತೆ ಗುಣ ಶೋಭಿತೆ॥3॥

# ಶ್ರೀ ಕನ್ಯಕಾ ಪರಮೇಶ್ವರಿ ಅಮೃತ ಚರಿತ್ರೆ

ಶ್ರೀ ಕನ್ಯಕಾ ಪರಮೇಶ್ವರೀ ಅಥವಾ ವಾಸವಿ ಆರ್ಯವೈಶ್ಯ ಜನಾಂಗದ ಇಷ್ಟದೇವತೆ, ಸ್ವತಃ ಪಾರ್ವತೀದೇವಿಯೇ ವೈಶ್ಯಕುಲದಲ್ಲಿ ಅವತರಿಸಿ, ವೈಶ್ಯ ಕುಲವನ್ನೇ ಉದ್ಧರಿಸಿ ಇಂದಿಗೂ ಭಕ್ತಾಭೀಷ್ಟವನ್ನು ನೆರವೇರಿಸುತ್ತಿರುವ ಈ ದೇವಿಯ ಮಹಿಮೆಯನ್ನು ಸಾರುವ ಪೌರಾಣಿಕ ಕಥಾನಕಗಳು ಅನೇಕವಿವೆ.

ಲೋಕ ಮಂಗಳ ಕಾರ್ಯವನ್ನು ಸಾಧಿಸಿದ ಭಗವತಿ ವಾಸವಾಂಬಾ ಮಹಿಮೆಯು ಅಸಾಮಾನ್ಯವಾದದ್ದು, ಈ ಮಹಾ ಚೈತನ್ಯವನ್ನು ವೈಶ್ಯಕುಲದವರು ತಮ್ಮ ದೇವತೆಯೆಂದೂ, ಪರಾತ್ಪರ ಸ್ವರೂಪವೆಂದೂ ಭಾವಿಸುವುದೂ ಉಪಾಸಿಸುವುದೂ, ಯೋಗ್ಯವೇ ಆಗಿದೆ. ಈ ದೇವಿಯ ಮಹಿಮೆಯನ್ನು ಮನಗಂಡ ಇತರರೂ ಸಹ ಅವಳನ್ನು ಆರಾಧಿಸಿ ತಮ್ಮ ಶ್ರೇಯಸ್ಸನ್ನೂ ಸಾಧಿಸಿಕೊಳ್ಳಬಹುದೆಂಬ ವಿಷಯದಲ್ಲಿ ಯಾವ ಸಂಶಯವೂ ಇಲ್ಲ.

ಸಕಲ ಸದ್ಗುಣಾಭರಣೆಯೂ, ಪುಣ್ಯ ಚರಿತೆಯೂ, ಮಾಯಾ ಸ್ವರೂಪಳೂ, ಪರಮೇಶ್ವರಿಯೂ, ಜಗಜ್ಜನನಿಯೂ ಆದ ದೇವಿಯು ಪರಮ ಧಾರ್ಮಿಕನೂ, ಸತ್ಯಪರನೂ ಆದ ಕುಸುಮ ಶ್ರೇಷ್ಠಿಯ ಮಗಳಾಗಿ ಅವತರಿಸಿದಳು. ಮಹಾ ಮಹಿಮಾನ್ವಿತಳಾದ ಈ ಕನ್ಯಕಾ ಪರಮೇಶ್ವರಿಯು ವೈಶ್ಯ ಕುಲವನ್ನುದ್ಧಾರಮಾಡುವ ಈ ಕಥೆಯನ್ನು ಶ್ರವಣಮಾಡಿ ಸಕಲ ಪಾಪಗಳಿಂದಲೂ ಮುಕ್ತರಾಗೋಣ. ಕನ್ಯಕಾ ಪರಮೆಶ್ವರಿಯಾದ ವಾಸವೀದೇವಿಯು ನೇಮ ನಿಷ್ಠೆಯಿಂದಲೂ, ಶೀಲ ಸಂಪತ್ತಿನಿಂದಲೂ ಬಾಳಿ ಜಗತ್ತಿಗೆ ಕಲ್ಯಾಣವನ್ನು ಮಾಡುತ್ತಾ ಸಕಲ ಸುಖ ಸಂಪತ್ತುಗಳನ್ನು ಪಡೆಯಿರಿ ಎಂದು ವೈಶ್ಯ ಜನರಿಗೆ ವರವನ್ನಿತ್ತಳು.

ನೈಮಿಷಾರಣ್ಯದಲ್ಲಿ ಯಾಗವನ್ನು ನಡೆಸುತ್ತಿದ್ದ ಮುನಿಗಳು ಸೂತ ಮಹರ್ಷಿಗಳನ್ನು ಕುರಿತು ಶ್ರೇಷ್ಠವಾದ ವೈಶ್ಯ ಚರಿತ್ರೆಯನ್ನು ಹೇಳಬೇಕೆಂದು

ಪ್ರಾರ್ಥಿಸಲು ಅವರು ಬ್ರಹ್ಮಾದಿಗಳು ಭೂಮಿಯಲ್ಲಿ ಅವತಾರಮಾಡಿದ ವಿಷಯವನ್ನು ನಿರೂಪಿಸಿದರು. ಚೂಡಾಮಣಿ ಎಂಬ ವೈಶ್ಯನು ಪುತ್ರಾರ್ಥಿಯಾಗಿ ಚ್ಯವನಭಾರ್ಗವ ಋಷಿಗಳನ್ನು ಆಶ್ರಯಿಸಿ ಯಜ್ಞಮಾಡಿ ಧರ್ಮನಂದನನೆಂಬ ಮಗನನ್ನು ಶಿವನ ಅನುಗ್ರಹದಿಂದ ಪಡೆದನು. ಈ ಧರ್ಮನಂದನನು ಆದಿಶೇಷನನ್ನು ಸಂದರ್ಶಿಸಿ, ಅವನಿಂದ ಜಗತ್ ಸೃಷ್ಟಿಯ ವಿಷಯಗಳನ್ನು ಕೇಳಿ ತಿಳಿದುಕೊಂಡನು.

ಬ್ರಹ್ಮನು ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರನ್ನು ಕರೆಸಿ, ಅವರವರ ಗೋತ್ರಾಭಿವೃದ್ಧಿಯನ್ನು ಕೇಳಲು ಬ್ರಾಹ್ಮಣರಲ್ಲಿ 107 ಗೋತ್ರಗಳಲ್ಲಿ 18 ಮಾತ್ರ ಪ್ರಸಿದ್ಧವಾಗಿವೆ ಎನ್ನಲು, ಕ್ಷತ್ರಿಯರ ಪ್ರತಿನಿಧಿ ಧನಂಜಯ ಮಹಾರಾಜನು ನಮ್ಮಲ್ಲಿ 7 ಗೋತ್ರಗಳಿದ್ದು ಎಲ್ಲವೂ ಪ್ರಸಿದ್ಧವಾಗಿವೆ ಎಂದು ವಿಜ್ಞಾಪಿಸಿಕೊಂಡನು. ವೈಶ್ಯಶ್ರೇಷ್ಠನಾದ ಸಮಾಧಿಯು ನಮ್ಮಲ್ಲಿ 714 ಗೋತ್ರಗಳಿವೆ ಎಂದು ಭಿನ್ನವಿಸಿಕೊಂಡನು.

ಸ್ವಧರ್ಮ ನಿರತರಾದ ಎಲ್ಲಾ ವರ್ಣದವರನ್ನು ಅಭಿನಂದಿಸಿದ ಬ್ರಹ್ಮನು ವೈಶ್ಯರ ಗೋತ್ರಗಳಲ್ಲಿ ಪ್ರಸಿದ್ಧವಾದವುಗಳು ಎಷ್ಟು ಎಂಬುದು ತಿಳಿದಿರಲಿಲ್ಲ. ಈಗ ನಾನು ಅದನ್ನು ಪ್ರಕಟಗೊಳಿಸುತ್ತೇನೆಂದನು. "ಮುಂದೆ ಕುಸುಮ ಶ್ರೇಷ್ಠಿಯು ವೈಶ್ಯರ ನಾಯಕನಾಗುವನು. ಅವನಿಗೆ ವಿಶೇಷವಾದ ಸೌಂದರ್ಯವುಳ್ಳ ಪುತ್ರಿಯು ಹುಟ್ಟುವಳು. ಅವಳನ್ನು ಓರ್ವ ರಾಜನು ಮೋಹಿಸುವನು." ಅವನನ್ನು ಮದುವೆಯಾಗಲು ಕನ್ಯೆಯು ಒಪ್ಪುವುದಿಲ್ಲ. ತಂದೆ ತಾಯಿ ಬಂಧು ಬಳಗ ಪರಿವಾರದವರು ರಾಜನ ಅಭಿಮತಕ್ಕೆ ವಿರೋಧಿಗಳಾಗುವರು. ರಾಜನು ಪ್ರಬಲ ನಾದುದರಿಂದ ಬಲಪ್ರಯೋಗ ಮಾಡುವನು. ಆಗ 102 ಗೋತ್ರದವರು ಮಾತ್ರ ಧರ್ಮಕ್ಕಾಗಿ ತ್ಯಾಗಕ್ಕೆ ಸಿದ್ಧರಾಗುವರು. ಆದಿಶಕ್ತಿಯ ಅವತಾರವಾದ ಈ ಕನ್ಯೆಯು ಅವರೊಂದಿಗೆ ಅಗ್ನಿಪ್ರವೇಶಮಾಡಿ ಉದ್ಧರಿಸುವಳು. ಈ 102 ಗೋತ್ರಗಳು ಮಾತ್ರ ಲೋಕದಲ್ಲಿ ಪ್ರಸಿದ್ಧವಾಗುವುವು ಎಂದು ಬ್ರಹ್ಮನು ವೈಶ್ಯರಿಗೆ ಶುಭಕೋರಿದನು.

ಈ ಕಥೆ ವೈಶ್ಯರ ಪೂರ್ವಚರಿತ್ರೆ, ಇದನ್ನು ಬ್ರಹ್ಮನು ಆದಿಶೇಷನಿಗೆ, ಆದಿಶೇಷನು ಧರ್ಮನಂದನನಿಗೆ ಹೇಳಿದನು. ಈ ವಿಷಯವು ನಾರದರಿಂದ

ಸಾಲಂಕಾಯನ ಋಷಿಗೆ ತಿಳಿಯಿತು. ಈತ ವೈಶ್ಯ ಋಷಿಗಳಿಗೆ ಹೇಳಿದನು. ಅದನ್ನೇ ಸೂತ ಪುರಾಣಿಕರು ಶೌನಕಾದಿ ಮುನಿಗಳಿಗೆ ಹೇಳಿದರು.

ಪರಮ ತಪೋಧನನೂ, ವೈಶ್ಯಕುಲ-ಲಲಾಮನೂ ಆದ ಸೋಮದತ್ತನ ಕುವರಿ ಕೀರ್ತಿಎಂಬುವಳನ್ನು ಚಿತ್ರಕಂಠನೆಂಬ ಗಂಧರ್ವನು ಮೋಹಿಸಿದನು. ವಿಧಿನಿಯಮವು ಹೇಗಿದೆಯೋ ಹಾಗೆಯೇ ಆಗುವುದು ಮುಂದೆ ನಾನು ಭೂಲೋಕದಲ್ಲಿ ಜನಿಸಿ ಮಾನವಧರ್ಮವನ್ನು ಅನುಸರಿಸಿ ವಿಧಿವಿಹಿತವಾಗಿ ಆಕೆಯನ್ನು ವಿವಾಹವಾಗುವೆನೆಂದು ಚಿತ್ರಕಂಠನು ತಿಳಿಸಿದನು. ಶಿವನ ಮಾತನ್ನು ಗಮನಿಸದೆ ದಾಕ್ಷಾಯಣಿಯು ತಂದೆಯು ಮಾಡುತ್ತಿದ್ದ ಯಜ್ಞವನ್ನು ನೋಡಲು ತನ್ನ ಪರಿವಾರದೊಡನೆ ಹೊರಟಳು. ದಕ್ಷನಿಂದ ಅವಮಾನಿತಳಾದ ದಾಕ್ಷಾಯಣಿಯು ಯಜ್ಞ ಕುಂಡದಲ್ಲಿ ಬಿದ್ದು ಶರೀರತ್ಯಾಗ ಮಾಡಿದಳು. ಅವಳೊಡನೆ ಬಂದಿದ್ದ ಶಿವಗಣಗಳು ಕ್ರೋಧತಪ್ತರಾಗಿ ನೆರೆದಿದ್ದವರ ಮೇಲೆ ದಾಳಿಮಾಡಿದರು. ವಿಷಯವನ್ನು ತಿಳಿದ ಶಿವನು ತನ್ನ ಕ್ರೋಧಾಗ್ನಿಯಿಂದ ದಕ್ಷನ ಯಜ್ಞನಾಶಕ್ಕಾಗಿ ವೀರಭದ್ರನನ್ನು ಸೃಷ್ಟಿಸಿದನು. ಶಿವನ ಇಚ್ಛೆಯಂತೆ ವೀರಭದ್ರನು ಕೋಪಗೊಂಡು ದಕ್ಷಬ್ರಹ್ಮನ ಯಾಗಶಾಲೆಯನ್ನು ನಾಶಮಾಡಿದನು. ಆ ಬಳಿಕ ನೊಂದದೇವತೆಗಳು ಶಿವನಲ್ಲಿಗೆ ಹೋಗಿ ಅವನನ್ನು ಸ್ತುತಿಸಿದರು. ಆಗ ಶಿವನು ಮೆಚ್ಚಿ ಗಿರಿಜೆಯು ಮುಂದೆ ಅವತಾರಮಾಡುವಳು ಎಂದು ಹೇಳಿದನು.

ನಾರದರು ಪರ್ವತರಾಜನಿಗೆ ಹಿಂದಿನ ಕಥೆಯನ್ನೆಲ್ಲಾ ತಿಳುಹಿ, ಎಲೈ ಹಿಮವಂತನೆ, ಹಿಂದೆ ದಾಕ್ಷಾಯಣಿಯೂ ಪರಶಿವನನ್ನು ಮದುವೆಯಾಗಿ ಅವನನ್ನು ನಿರ್ಮಲಾಂತಃಕರಣ ದಿಂದ ಸೇವಿಸುತ್ತಲಿದ್ದು, ಯಾವುದೋ ಒಂದು ಕಾರಣಕ್ಕಾಗಿ ದೇಹತ್ಯಾಗ ಮಾಡಿದಳು. ಆ ದಾಕ್ಷಾಯಿಣಿಯೇ ಈಗ ನಿಮ್ಮ ತಪಸ್ಸಿಗೆ ಮೆಚ್ಚಿ ನಿಮಗೆ ಮಗಳಾಗಿ ಜನಿಸಿರುವಳು. ಇವಳು ಶೀಘ್ರದಲ್ಲಿಯೇ ಪರಶಿವನನ್ನು ಮೆಚ್ಚಿಸಿ ಲಗ್ನವಾಗುವಳು. ಇದರಿಂದ ನಿಮಗೂ ವಿಶೇಷ ಕೀರ್ತಿ ಲಭಿಸುವುದೆಂದು ಅರುಹಿದರು.

ಗಿರಿಜಾ ಶಂಕರರ ವಿವಾಹದ ಮಹೋತ್ಸವಕ್ಕಾಗಿ ಹಿಮವಂತನನ್ನು ಮೇನಾದೇವಿಯನ್ನೂ ಅಲ್ಲಿಗೆ ಶೀಘ್ರವಾಗಿ ಕರೆಸಿದರು. ಇಂದ್ರನೇ ಮೊದಲಾದ

ದೇವತೆಗಳೂ, ಗಂಧರ್ವರೂ, ನಾಗರೂ, ವಿದ್ಯಾಧರರೂ, ದೇವಮುನಿಗಳೂ, ಅಲ್ಲಿಗೆ ಆಗಮಿಸಿದರು. ಸಕಲರೂ ಪರಮ ಸಂತೋಷದಿಂದ ಆಶೀರ್ವಾದಗಳನ್ನು ಮಾಡುತ್ತಿರಲು, ಸಪ್ತರ್ಷಿ ಹೆಂಡತಿಯರು ರತ್ನದಾರತಿಯನ್ನು ಎತ್ತಲು, ವಿಪ್ರಸಮೂಹವು ವೇದಮಂತ್ರಗಳನ್ನು ಪಠಿಸುತ್ತಾ ಜಯಕಾರ ಮಾಡುತ್ತಿರಲು ಪಾರ್ವತೀ ಪರಮೇಶ್ವರರ ವಿವಾಹವು ಲೋಕಗಳಿಗೆ ಆನಂದಕಾರಣವಾಗಿ ಪರಿಣಮಿಸಿತು.

ತನ್ನ ಕಲ್ಯಾಣಮಹೋತ್ಸವಕ್ಕೆ ವೈಶ್ಯರು ಯಾರೂ ಬಾರದಿರಲು ಕಾರಣವೇನು ? ಎಂದು ಶಿವನು ಕೇಳಲು, ಅದಕ್ಕೆ ಕುಬೇರನು ಅವರು ತಪಸ್ಸಿನಲ್ಲಿ ಇರುವವರು ಎಂದು ಹೇಳಿದನು. ಆಗ ಶಿವನು ಅವರು ಭೂಲೋಕಕ್ಕೆ ಹೊರಡಲಿ ಎಂದನು. ಮುಂದೆ ಪಾರ್ವತಿಯು ಕುಸುಮಾಂಕನೆಂಬ ವೈಶ್ಯನಿಗೆ ಮಗಳಾಗಿ ಜನಿಸಿ ಕುಲವನ್ನು ಉದ್ಧರಿಸುವಳು.

ಕನ್ಯಕಾ ಪರಮೇಶ್ವರಿಯ ಮಹಾಪುರಾಣವನ್ನು ಹೇಳುತ್ತಿದ್ದ ಸೂತ ಮಹರ್ಷಿಗಳು ಅಪ್ಪಣೆ ಕೊಡಿಸುತ್ತಾರೆ. “ಶೌನಕಾದಿ ಮಹಾಮುನಿಗಳೇ ಕೇಳೋಣವಾಗಲಿ” ವೈಶ್ಯರೆಲ್ಲರೂ ಮೌನದಿಂದ ಸತ್ಯಲೋಕದಿಂದ ಹೊರಟು, ಹರ್ಷಚಿತ್ತದಿಂದ ಮಹಾವಿಷ್ಣುವಿನ ವೈಕುಂಠವನ್ನು ಸಾರಿ, ಅವನ ಚರಣಕಮಲಗಳಿಗೆ ನಮಸ್ಕರಿಸಿ, ಬ್ರಹ್ಮದೇವನೂ, ಪರಮೇಶ್ವರನೂ ಅಪ್ಪಣೆ ಕೊಡಿಸಿದುದನ್ನು ವಿಷ್ಣುವಿಗೆ ನಿವೇದಿಸಲು, ಅದನ್ನು ಕೇಳಿ, ಮುಗುಳುನಗೆ ನಕ್ಕು ಹರಿಯು “ನಾನು ಜನಾರ್ದನ ಸ್ವರೂಪದಲ್ಲಿ ಭೂಲೋಕದಲ್ಲಿ ಅವತರಿಸುವೆನು. ಕ್ಷೀರಸಾಗರ ಕನ್ಯೆಯಾದ ಮಹಾಲಕ್ಷ್ಮಿಯು ಕಮಲೆಯಾಗಿ ಅವತರಿಸಿ ವೈಶ್ಯಕುಲವನ್ನು ಕಾಪಾಡುವಳು” ಎಂದನು.

ಈ ರೀತಿಯಾಗಿ ಹರಿಹರಬ್ರಹ್ಮಾದಿಗಳಿಂದ ಆಶ್ವಾಸನವನ್ನು ಪಡೆದು ವೈಶ್ಯ ಶ್ರೇಷ್ಠರು ಭೂಲೋಕಕ್ಕೆ ಇಳಿದು ಪರಮೋಲ್ಲಾಸದಿಂದ ಶಾಂತಚಿತ್ತರಾಗಿ ತ್ರಿಮೂರ್ತಿಗಳನ್ನು ಧ್ಯಾನಮಾಡುತ್ತಾ ವಿಶ್ವಕರ್ಮನು ನಿರ್ಮಿಸಿದ ಪಟ್ಟಣಕ್ಕೆ ಬಂದರು. ಭಗವಧ್ಯಾನದಲ್ಲಿ ನಿರತರಾಗಿ ಹರಿಹರಾರ್ಚನೆಯನ್ನು ತಪ್ಪದೇ ಮಾಡುತ್ತಿದ್ದರು.

ಸಕಲ ಸೌಭಾಗ್ಯಗಳ ಗಣಿಯೆನಿಸಿದ, ಭರತ ವರ್ಷದಲ್ಲಿ ಸುಖಭೋಗಗಳ ಬೀಡಾಗಿರುವ ಆಂಧ್ರಪ್ರದೇಶಕ್ಕೆ ಮುಕುಟದೋಪಾದಿಯಲ್ಲಿ ಪಶ್ಚಿಮ ದಿಗ್‌ಭಾಗದಲ್ಲಿ ಗೋದಾವರಿ ಪುಣ್ಯ ನದಿಯ ಪ್ರದೇಶವು ಕಂಗೊಳಿಸುತ್ತಿತ್ತು. ಅಲ್ಲಿ ವಿಶ್ವಕರ್ಮನಿಂದ ನಿರ್ಮಿತವಾದ 18 ಪಟ್ಟಣಗಳಿಗೆ ಕಲಶಪ್ರಾಯವಾಗಿ, ಉಲ್ಲಾಸ ಸಂಭ್ರಮಗಳಿಂದಲೂ ಸತ್ಕರ್ಮಗಳಿಂದಲೂ ಕೂಡಿದ ಜನಗಳಿಂದ ನಿಬಿಡವಾದ, ಪೆನುಗೊಂಡೆ ಎಂಬ ಪಟ್ಟಣವು ರಾಜಧಾನಿಯಾಗಿದ್ದು, ಸಕಲಾರ್ಥಿಗಳಿಗೂ, ಆಶ್ರಯವೆನಿಸಿ ಮೆರೆಯುತ್ತಿದ್ದು, ಅಲ್ಲಿ ವಾಸಿಸುತ್ತಿದ್ದ ವೈಶ್ಯಕುಲಕೋಟಿಗಳು ಯಾವಾಗಲೂ ಉತ್ಸಾಹಶೀಲರಾಗಿ ವ್ಯವಹಾರಗಳನ್ನು ನಡೆಸುತ್ತಾ, ಧರ್ಮಮಾರ್ಗ ವನ್ನನುಸರಿಸಿ ತಮ್ಮ ಜೀವನಗಳನ್ನು ಸಾಗಿಸುತ್ತಿದ್ದರು.

ಹದಿನೆಂಟು ಪಟ್ಟಣಗಳಿಗೂ ತನ್ನ ಸೊಬಗಿನಿಂದಲೂ, ಸಂಪತ್ತಿನಿಂದಲೂ ಪ್ರಕಾಶಿಸುತ್ತಿದ್ದ ಪೆನುಗೊಂಡೆ ಎಂಬ ಪಟ್ಟಣವು ರಾಜಧಾನಿಯಾಗಿದ್ದು ಅನರ್ಘ್ಯ ರತ್ನಮಾಲೆಯಲ್ಲಿ ಬೆಳಗುವ ಪದಕದಂತೆ ವಿರಾಜಿಸುತ್ತಿದ್ದಿತು. ಅಲ್ಲಿಗೆ ವಿನಯಶೀಲನೂ ಗುಣವಂತನೂ ಆಗಿದ್ದ ವಾಸವಶ್ರೇಷ್ಠಿ ಎಂಬುವನು ಸಂಪ್ರದಾಯದಂತೆ ಧರ್ಮಾಚರಣೆಮಾಡುತ್ತಾ ಚಾಲುಕ್ಯ ಚಕ್ರವರ್ತಿಯಾದ ಪ್ರಖ್ಯಾತ ವಿಷ್ಣುವರ್ಧನನ ಸಾಮಂತನಾಗಿ ಪ್ರಜಾಪಾಲನೆಯನ್ನು ಮಾಡುತ್ತಿದ್ದನು. ಶ್ರೇಷ್ಠವಾದ ಪೆಂಡ್ಲಿ ಗೋತ್ರದ ಪ್ರಭಾತಮುನಿ ವಂಶೋದ್ಭವನೂ, ಸರಳ ಸ್ವಭಾವದವನೂ, ಪ್ರಶಾಂತ ಹೃದಯನೂ, ಸಂಯಮಿಯೂ, ತ್ಯಾಗಿಯೂ, ಪರಹಿತಾಕಾಂಕ್ಷಿಯೂ ಆಗಿದ್ದ ವಾಸವಶ್ರೇಷ್ಠಿಯು ತನ್ನ ಸತಿಯಾದ ಕಾವೇರಿ ಯೊಡನೆ ನಿರಂತರವೂ ತಪ್ಪದೆ ಪರಮೇಶ್ವರನನ್ನೇ ನಾನಾ ವಿಧವಾದ ದಿವ್ಯ ಕುಸುಮಗಳಿಂದಲೂ ಭಕ್ತಿಯಿಂದಲೂ ಪೂಜಿಸುತ್ತಿರಲು ಆ ದಂಪತಿಗಳಿಗೆ ಕುಸುಮಾಂಬಾ ಕುಸುಮಶ್ರೇಷ್ಠಿ ಎಂಬ ಹೆಸರೇ ಪ್ರಸಿದ್ಧವಾಯಿತು.

ಕುಸುಮಶ್ರೇಷ್ಠಿಗೆ ಅಪಾರವಾದ ಧನಸಂಪತ್ತುಗಳಿದ್ದುವು. ವಿನಯಶೀಲರಾದ ಬಂಧುಬಳಗದವರು ಇದ್ದರು. ಸಕಲ ಭೋಗಗಳೂ ದೊರೆತಿದ್ದುವು. ಆದರೆ ಇವೆಲ್ಲವುಗಳಿಂದ ಏನು ಪ್ರಯೋಜನ? ವಂಶೋದ್ಧಾರಕವಾದ ಸಂತಾನವು

ಇಲ್ಲದಿರಲು ಅವನ ಮನಸ್ಸು ವ್ಯಾಕುಲಗೊಂಡಿತ್ತು. ಅವನು ತನ್ನ ಕುಲಗುರುವಾದ ಭಾಸ್ಕರಾಚಾರ್ಯನಿಂದ ಆಜ್ಞಪ್ತನಾಗಿ ಪರಿವಾರದ ಸಲಹೆಯಂತೆ, ಪುತ್ರಕಾಮೇಷ್ಠಿ ಯಾಗವನ್ನು ಮಾಡಲು ಉತ್ಸಾಹಗೊಂಡನು. ಅನುಪಮಾಲಂಕಾರ ಗಳಿಂದಲೂ ಜನಗಳ ಸಂಭ್ರಮದಿಂದಲೂ ಪಟ್ಟಣವು ರಂಜಿಸಿತು. ನೆರೆಹೊರೆಯ ದೇಶಗಳ ರಾಜರುಗಳೂ, ಸಾಮಂತರೂ, ಸಚಿವರೂ, ಪುರಪ್ರಮುಖರೂ, ಕವಿಗಳೂ, ವಿದ್ವಾಂಸರು ಕೂಡಿಬಂದು ಮಂಟಪದಲ್ಲಿ ಸೇರಿದರು. ಅಮಿತೋತ್ಸಾಹದಿಂದ ಕುಸುಮ ದಂಪತಿಗಳು ಯಜ್ಞದೀಕ್ಷಿತರಾಗಿ ಋತ್ವಿಜರ ಮಂತ್ರಪಠಣಗಳೊಡನೆ ಯಾಗವನ್ನು ಮಾಡಲು ಉಪಕ್ರಮಿಸಿದರು.

ಒಂದು ವಾರದ ಕಾಲ ಹಗಲಿರುಳು ಶ್ರದ್ಧಾಭಕ್ತಿಗಳಿಂದ ಯಾಗವನ್ನು ಆಚರಿಸಿದರು. ಘೃತಪೂತವಾದ ಹವಿಸ್ಸುಗಳನ್ನು ಸ್ವೀಕರಿಸಿ ದೇವತೆಗಳು ಸಂತುಷ್ಟರಾದರು. ಕುಸುಮಾಂಬೆ - ಕುಸಮ ಶ್ರೇಷ್ಠಿಯ ಮನಸ್ಸಿನ ಅಂತರಾಳವನ್ನು ಅರಿತ ಪರಮೇಶ್ವರನು, ಸಂತೋಷಗೊಂಡು ಪಾರ್ವತಿಗೆ ಹೇಳಿದನು. "ಈ ದಂಪತಿಗಳು ನನ್ನ ಭಕ್ತರು. ಇವರ ಅಭೀಷ್ಟವನ್ನು ನೀನು ಕೃಪೆಮಾಡಿ ಅನುಗ್ರಹಿಸಬೇಕು" ಈ ಮಾತನ್ನು ಅಂಗೀಕರಿಸಿದ ಪಾರ್ವತಿಯು ಯಜ್ಞಕುಂಡದ ನಡುವೆ ದೇದೀಪ್ಯಮಾನವಾದ ಕಾಂತಿಯಿಂದ ಕೂಡಿ ನಗುಮುಖದಿಂದ ಕಂಗೊಳಿಸುತ್ತಾ, ವೈಶ್ಯದಂಪತಿಗಳ ಮನೋಭೀಷ್ಟವನ್ನು ಸಲ್ಲಿಸುವ ಉತ್ಸುಕತೆ ಯಿಂದ, ತನ್ನ ಕೈಗಳನ್ನು ಚಾಚಿ ದಿವ್ಯಫಲಗಳನ್ನು ಅವರಿಗಿತ್ತು, ಮಂಗಳಾಶೀರ್ವಚನ ವನ್ನು ಮಾಡಿ ಅಂತರ್ಧಾನಳಾದಳು. ಆ ಸಮಯದಲ್ಲಿ ದೇವದುಂದುಭಿಯು ಮೊಳಗಿದುವು. ಕುಸುಮ ವೃಷ್ಟಿಯಾಯಿತು. ಅದನ್ನು ಕಂಡು ಯಾಗಮಂಟಪದಲ್ಲಿ ನೆರೆದಿದ್ದ ಎಲ್ಲಾ ಜನರು ಆಶ್ಚರ್ಯಚಕಿತರಾದರು.

ದೇವಿಯ ದರ್ಶನದಿಂದ ಪುಳಕಿತರಾದ ಕುಸುಮದಂಪತಿಗಳು ನಿರ್ಮಲ ಮನೋಭಾವದಿಂದಲೂ, ಭಕ್ತಿ ಶ್ರದ್ಧೆಗಳಿಂದಲೂ, ಊಹಾತೀತವಾದ ಯಜ್ಞ ಸಾಫಲ್ಯವನ್ನು ಪಡೆದರು. ಕುಸುಮಶ್ರೇಷ್ಠಿಯು ಪರಮೋತ್ಸಾಹದಿಂದ ಸಕಲರನ್ನೂ ಸತ್ಕರಿಸಿ, ದಾನಗಳಿಂದಲೂ ಭೂರಿ ದಕ್ಷಿಣೆಗಳಿಂದಲೂ ಎಲ್ಲರನ್ನೂ ಸಂತೃಪ್ತಿಪಡಿಸಿ

ದಿವ್ಯಫಲವನ್ನು ತನ್ನ ಪತ್ನಿಯಾದ ಕುಸುಮಾಂಬೆಗೆ ಕೊಟ್ಟು ಅನಂತರ ಅವಭೃತಸ್ನಾನವನ್ನು ಮಾಡಿ, ಯಜ್ಞಸಮಾಪ್ತಿಯನ್ನು ಆಚರಿಸಿದನು.

ಜನ್ಮಾಂತರದ ಸುಕೃತ ವಿಶೇಷದಿಂದಲೂ, ಪರಮೇಶ್ವರನ ಅರ್ಧಾಂಗಿಯಾದ ಸರ್ವಮಂಗಳೆಯರ ಅನುಗ್ರಹದಿಂದಲೂ ಕುಸಮಾಂಬೆ ಗರ್ಭಧರಿಸಿದಳು. ಕುಸುಮಾಂಬೆಗೆ ದಿನ ದಿನಕ್ಕೂ ಬಸಿರಿನ ಬಯಕೆಗಳು ತೋರುತ್ತಿದ್ದವು. ಅವಳು ಮನಸ್ಸಿನ ಕೋರಿಕೆಗಳನ್ನು ತನ್ನ ಬಯಕೆಗಳಿಂದ ತೀರಿಸಿಕೊಂಡಳು. ಪ್ರೀತಿಯಿಂದ ತಂದಿದ್ದ ಉಡಿಗೆತೊಡಿಗೆಗಳನ್ನಲಂಕರಿಸಿಕೊಂಡು ಸಂತೋಷದಿಂದ ತನ್ನ ಸಖೀಜನರೊಡನೆ ಓಲಾಡಿದಳು. ಕಮಲಮುಖಿಯಾದ ಕುಸುಮಾಂಬೆಯು ಪ್ರತಿಕ್ಷಣವೂ ಪರಶಿವನ ಪತ್ನಿಯಾದ ಪಾರ್ವತೀದೇವಿಯೇ ತನಗೆ ಮಗಳಾಗಿ ಜನಿಸುವಳು ಎಂಬ ದೃಢವಿಶ್ವಾಸದಿಂದ ಸದಾಕಾಲವೂ ಪಾರ್ವತೀದೇವಿಯನ್ನು ಸ್ಮರಿಸುತ್ತಿದ್ದಳು. ಕುಸುಮಶ್ರೇಷ್ಠಿಯು ಶ್ರದ್ಧಾಭಕ್ತಿಗಳಿಂದ ಶಿವಪಾರ್ವತಿಯರನ್ನು ಎಡಬಿಡದೆ ಆರಾಧಿಸುತ್ತಿದ್ದರು. ಹೀಗೆ ನವಮಾಸಗಳು ತುಂಬಿದುವು.

ಶಾಲೀವಾಹನಶಕದ ಹನ್ನೊಂದನೇ ಶತಮಾನದ ಪ್ರಾರಂಭದಲ್ಲಿ ವೈಶಾಖ ಶುದ್ಧದಶಮೀ, ಶುಕ್ರವಾರ ಸಂಜೆ ಸೂರ್ಯಾಸ್ತ ಸಮಯವಾದ ಮೇಲೆ 12 ಘಳಿಗೆಗೆ ಸಲ್ಲುವ ಪುನರ್ವಸು ನಕ್ಷತ್ರದಲ್ಲಿ, ಶುಭಮುಹೂರ್ತದಲ್ಲಿ ಸಕಲಗ್ರಹಗಳೂ ತಂತಮ್ಮ ಉಚ್ಚ ಸ್ಥಾನಗಳಲ್ಲಿರಲು, ಕುಸುಮಾಂಬೆಯು ಏಕಮಾತ್ರ ಪುತ್ರನನ್ನೂ ಪುತ್ರಿಯನ್ನೂ ಪಡೆದಳು.

ಆ ಸಮಯದಲ್ಲಿ, ದೇವಾಂಶಸಂಭೂತಳಾದ ಹೆಣ್ಣು ಶಿಶುವನ್ನು ನೋಡಲು, ಚತುರ್ಭುಜವೂ ಪಾಶಾಬ್ಜ ಶುಕವೀಣಾಧಾರಿಯೂ ಆದ ಜಗನ್ಮಾತೆಯಾದ ಪಾರ್ವತಿಯು ಗೋಚರಿಸಲು ಕುಸುಮಾಂಬೆಯು ತನ್ನ ಮನಸ್ಸಿನ ಅಭೀಪ್ಸಿತವನ್ನು ದಾಕ್ಷಾಯಣೀದೇವಿಯು ಕುರಣೆಯಿಂದಲೂ, ಸಂತೋಷದಿಂದಲೂ ಈಡೇರಿಸಿದಳೆಂದು ಸಂತೋಷಗೊಂಡಳು. ನೀರು ಧಾರಾಕಾರವಾಗಿ ಕಣ್ಣುಗಳಿಂದ ಸುರಿದು, ಆನಂದ ಭಾಷ್ಪಗಳಿಂದಲೇ ಅವಳು ಸುಸ್ನಾತೆಯಾದಳು.

"ಎಲೈ ತಾಯೆ, ಕರುಣಾಮಯೀ, ದೇವಿ, ಕಲ್ಯಾಣಿ, ಪರಶಿವನರ್ಧಾಂಗಿ,

ಲೋಕರಕ್ಷಕಳೇ, ಪರಮಪಾವನಮೂರ್ತಿಯೇ, ಸಕಲ ಚೈತನ್ಯಾತ್ಮಕಳೇ, ವೈಶ್ಯ ಕುಲವನ್ನು ಉದ್ಧಾರಮಾಡಲು ಅತಿಶಯವಾದ ಪ್ರೀತಿಯಿಂದ ನೀನು ಜನಿಸಿರುವೆ" ಎಂದು ಭಕ್ತಿಯಿಂದ ಸ್ತೋತ್ರಮಾಡುತ್ತಾ ದಂಪತಿಗಳು ನಮಸ್ಕರಿಸಿದರು.

ಬ್ರಹ್ಮಾದಿಗಳಿಂದ ವಂದಿತಳಾದ ಕೌಮಾರಿಯು, ತನ್ನ ನಿಜಸ್ವರೂಪವನ್ನು ಅಡಗಿಸಿ, ಶಿಶುತನವನ್ನು ಪ್ರಕಟಿಸುತ್ತಾ, ತನ್ನ ಕೋಮಲವಾದ ಕೈಕಾಲುಗಳನ್ನು ಚೆಲ್ಲಾಡುತ್ತಾ, ಮಂದಹಾಸವನ್ನು ಸೂಸುತ್ತಾ ನಿದ್ದೆಹೋದಳು. ಸುಂದರಿಯರು ಮಗಳಿಗೆ ಆರತಿಯನ್ನೆತ್ತಿ ಜೋಗುಳವನ್ನು ಹಾಡಿ, ನಾನಾವಿಧವಾಗಿ ಹರಸಿ ತೂಗಿದರು.

ಶುಕ್ಲಪಕ್ಷದ ಚಂದ್ರನಂತೆ ಪ್ರವರ್ಧಮಾನವಾಗಿ ಬೆಳೆಯುತ್ತಿರುವ ಮಗಳಿಗೆ ಕುಸುಮಶ್ರೇಷ್ಠಿಯು ಜಾತಕರ್ಮಗಳನ್ನು ಮಾಡಿ, ಮಗಳಿಗೆ ವಾಸವೀಯೆಂದೂ, ಮಗನಿಗೆ ವಿರೂಪಾಕ್ಷನೆಂದೂ ನಾಮಕರಣಮಾಡಿದನು. ಮಕ್ಕಳಿಗೆ ಕಾಲಕಾಲಕ್ಕೆ ಉಚಿತವಾದ ಸಂಸ್ಕಾರಗಳನ್ನು ಮಹಾವೈಭವದಿಂದ ನೆರವೇರಿಸಿದನು. ಸ್ತ್ರೀಯರು ರತ್ನದಾರತಿಯನ್ನೆತ್ತಿ ಆನಂದಾತಿಶಯದಿಂದ ಹರಸಿದರು.

ಮಹಾಮಹಿಮಳಾದ ದೇವಿಯು ವೈಶ್ಯಕುಲದಲ್ಲಿ ಸಂಭವಿಸಿ ಅವರ ಕೀರ್ತಿಯನ್ನು ಉಜ್ವಲಗೊಳಿಸಿದಳು. ಪಾವನೆಯಾದ ಆಕೆಯು ಕೀರ್ತಿಕನ್ಯಾಂಬೆ ಹಾಗೂ ಕನ್ಯಕಾ ಎಂಬ ಹೆಸರುಗಳಿಂದ ಲೋಕವಿಖ್ಯಾತೆಯಾದಳು. ಕುಸುಮಾರ್ಯ ಶ್ರೇಷ್ಠಿಯು ತನ್ನ ಜನ್ಮವು ಸಾರ್ಥಕವಾಯ್ತೆಂದು ಕೃತಾರ್ಥಭಾವದಿಂದ ಮಹಾದೇವಿಯನ್ನು ಸ್ಮರಿಸುತ್ತಾ ಭಕ್ತಿಕುಸುಮಾಂಜಲಿಯನ್ನು ಅರ್ಪಿಸಿದನು.

ಕುಸುಮದಂಪತಿಗಳು ಮಕ್ಕಳ ಪೋಷಣೆಯಲ್ಲಿ ಯಾವುದಕ್ಕೂ ಊನವಿಲ್ಲದೆ, ಪರಮಪ್ರೇಮಾತಿಶಯದಿಂದ ಪೋಷಿಸುತ್ತಿರಲು, ಶೀಘ್ರದಲ್ಲಿಯೇ ಇಬ್ಬರು ಮಕ್ಕಳೂ ಸಕಲವಿದ್ಯೆಗಳನ್ನೂ ಕಲಿತರು. ಸೌಂದರ್ಯ, ಶರೀರಕಾಂತಿ, ಸದ್ಗುಣಗಳಿಂದ ಅಸಾಮಾನ್ಯರೆನಿಸಿ, ಗಾಂಭೀರ್ಯ ಚಾತುರ್ಯಗಳಿಂದ, ಜನಗಳ ಮನಸ್ಸನ್ನು ಆಕರ್ಷಿಸುತ್ತಾ ಮಕ್ಕಳು ಬೆಳೆದರು.

ಸಕಲರೂಪಾತಿಶಯದಿಂದ ಮೆರೆಯುತ್ತಿದ್ದ ವಾಸವಿಯು ತನ್ನ ಸದ್ಗುಣಗಳಿಂದ

ಎಲ್ಲರ ಮೆಚ್ಚುಗೆಯನ್ನು ಪಡೆದಳು. ಎಲ್ಲರಿಗೂ ಹಿತಳಾಗಿ ನಡೆದು ಎಲ್ಲರ ಮನಸ್ಸನ್ನೂ ಆಕರ್ಷಿಸಿದಳು. ತನ್ನ ಜೊತೆಯವರೊಡನೆ ನಲಿಯುತ್ತಿದ್ದ ಅವಳು ನಕ್ಷತ್ರಮಂಡಲದಲ್ಲಿ ಬೆಳಗುವ ಚಂದ್ರನಂತೆಯೂ, ನಿರ್ಮಲವಾದ ವೈಶ್ಯಕುಲಕ್ಕೆ ಅಧಿದೇವತೆಯಂತೆ ಶೋಭಿಸಿದಳು.

ಸೂರ್ಯನು ಉದಯಗಿರಿಯಲ್ಲಿ ಗೋಚರಿಸಲು, ತಾನು, ತನ್ನ ಜನನೀ ಜನಕರಂತೆಯೇ ಸುಗಂಧಪುಷ್ಪಗಳನ್ನು ತರಿದೊಟ್ಟಿ, ಪೂಮಾಲೆಗಳನ್ನು ಕಟ್ಟಿ ಶಿವನಿಗೆ ಅರ್ಪಿಸುತ್ತಿದ್ದಳು. ತ್ರಿಕರಣಪೂರ್ವಕವಾಗಿ, ತನುಮನಧನಗಳನ್ನು ಶಿವಾರ್ಪಣ ಮಾಡಿ, ಸದಾಕಾಲವೂ, ಶಿವನಧ್ಯಾನ, ಶಿವನಪೂಜೆ, ಶಿವನಾಮಸಂಕೀರ್ತನೆಯಲ್ಲಿ ನಿರತಳಾಗಿದ್ದಳು.

ಆಂಧ್ರಪ್ರದೇಶದ ಗೋದಾವರಿಯ ತೀರದಲ್ಲಿ ವಿರಾಜಮಾನವಾಗಿದ್ದ ರಾಜಮಹೇಂದ್ರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು, ನೀತಿಕೌಶಲಗಳಿಂದ ಚಾಲುಕ್ಯರಾಜರು ಆಳುತ್ತಿದ್ದರು. ಅವರ ರಾಜ್ಯವು ನೆಲ್ಲೂರಿನಿಂದ ವಿಶಾಖಪಟ್ಟಣದವರೆಗೆ ವ್ಯಾಪಿಸಿದ್ದಿತು. ಹದಿನೆಂಟು ಪಟ್ಟಣಗಳಿಂದ ಕೂಡಿ ಪೆನುಗೊಂಡೆಯು ಹಿಂದೆ ಈ ಚಾಲುಕ್ಯ ರಾಜರಿಗೆ ಅಧೀನವಾಗಿದ್ದಿತು. ಕುಸುಮಶ್ರೇಷ್ಠಿಯು ಚಾಲುಕ್ಯರಾಜರ ಸಾಮಂತನಾಗಿ, ತನ್ನ ವಿಶಾಲಮನೋಭಾವದಿಂದ ಸಕಲ ಜನರಿಗೂ ಸುಖಸಮೃದ್ಧಿಗಳನ್ನು ಒದಗಿಸುತ್ತಾ, ತ್ರಿಕರಣಪೂರ್ವಕವಾಗಿ ಅವರ ಮೇಲ್ಮೆಯನ್ನು ಬಯಸುತ್ತಾ, ಸಂತೋಷದಿಂದ ರಾಜ್ಯವಾಳುತ್ತಿದ್ದನು.

ಚಾಲುಕ್ಯರಾಜರಲ್ಲಿ ಮಹಾಕುಶಲಿಯೂ, ಕೀರ್ತಿಶಾಲಿಯೂ ಆಗಿದ್ದ ವಿಮಲಾದಿತ್ಯವಿಷ್ಣುವರ್ಧನನೆಂಬುವನು ರಾಜ್ಯಪರಿಪಾಲನೆಯನ್ನು ಮಾಡುತ್ತಿದ್ದನು. ಶತ್ರುರಾಜರನ್ನು ತನ್ನ ಪರಾಕ್ರಮದಿಂದ ಅಡಗಿಸಿ, ರಾಜ್ಯವಿಸ್ತಾರವನ್ನು ಮಾಡಿ, ರಾಜಸೂಯಯಾಗವನ್ನು ಮಾಡಿದನು. ಇವನು ಪ್ರಜಾವಾತ್ಸಲ್ಯನಾಗಿ ಜನಗಳ ಮನ್ನಣೆಗೆ ಪಾತ್ರನಾಗಿದ್ದನು. ಹೀಗಿರಲು ಒಂದುಸಲ, ವನಪ್ರಾಂತ್ಯಗಳಲ್ಲಿ ಕಾಡುಮೃಗಗಳು ಹೆಚ್ಚಿ ಜನಗಳಿಗೂ, ಪಶುಗಳಿಗೂ ಬಾಧೆಯನ್ನುಂಟುಮಾಡಲು ಈ ವಿಷ್ಣುವರ್ಧನನು ವಿವಿಧ ಆಯುಧಗಳೊಡನೆ ಸನ್ನದ್ಧರಾದ ಬೇಡಪಡೆ ಗಳೊಡನೆ

ಹೊರಟು ದುಷ್ಟಜಂತುಗಳನ್ನು ಬೇಟೆಯಾಡಿ, ತನಗೆ ಅಧೀನವಾಗಿದ್ದ ರಾಜ್ಯಗಳನ್ನು ನೋಡಿಕೊಂಡು ಬರಲು ಪೆನುಗೊಂಡೆ ಪಟ್ಟಣಕ್ಕೆ ಬಂದನು.

ಆ ಪೆನುಗೊಂಡೆಯು ಅನೇಕ ಭವನಗಳಿಂದಲೂ, ಲತಾಕುಂಜಗಳಿಂದಲೂ, ಉದ್ಯಾನಗಳಿಂದಲೂ ಕೂಡಿ ಶೋಭಿಸುತ್ತಿದ್ದಿತು. ವನಪ್ರದೇಶಗಳಲ್ಲಿ ನೀಳವಾಗಿ ಬೆಳೆದ ಗಿಡಮರಗಳು ಕಾಡಿನ ಸೊಬಗನ್ನು ಹೆಚ್ಚಿಸಿತ್ತು. ವಿಷ್ಣುವರ್ಧನನು ನಗರದ ವೈಭವಕ್ಕೆ ಮನಸೋತು, ಅಲ್ಲಿಯೇ ಬಿಡಾರವನ್ನು ಹೂಡಿ, ಬೇಟೆಯಿಂದ ಉಂಟಾಗಿದ್ದ ಆಯಾಸವನ್ನು ಪರಿಹರಿಸಿಕೊಳ್ಳಲು ಇಚ್ಛಿಸಿದನು. ವಿಷ್ಣುವರ್ಧನನು ತನ್ನ ಪರಿವಾರವನ್ನು ಕರೆದುಕೊಂಡು ಈ ನಗರದ ಉದ್ಯಾನದಲ್ಲಿ ಕೆಲವುಕಾಲ ಸುತ್ತಾಡಿಕೊಂಡಿದ್ದು ಅನಂತರ ಪ್ರಯಾಣವನ್ನು ಮುಂದುವರಿಸೋಣ ಎನ್ನಲು, ಅವರು ಅದನ್ನು ಅನುಮೋದಿಸಿ ಹಸ್ತಿ ಅಶ್ವರಥಗಳನ್ನು ಬಿಡಾರಗಳಲ್ಲಿ ಸೇರಿಸಿಬಂದು ರಾಜನೊಡನೆ ಸುಖಸಲ್ಲಾಪಮಾಡುತ್ತಾ ಕಾಲಕಳೆಯುತ್ತಿದ್ದರು.

ವಿಷ್ಣುವರ್ಧನ ಮಹಾರಾಜನು ತನ್ನ ಪಟ್ಟಣಕ್ಕೆ ಬಂದು ಅಲ್ಲಿನ ಪುಷ್ಪ ವನಗಳಲ್ಲಿ ಬಿಡಾರವನ್ನು ಮಾಡಿರುವ ಸಂಗತಿಯನ್ನು ತಿಳಿದು, ಕುಸುಮಶ್ರೇಷ್ಠಿಯು ಬಹಳ ಉತ್ಸಾಹದಿಂದ ತನ್ನ ಸಚಿವ ಪರಿವಾರದೊಡನೆ ಕೂಡಿಕೊಂಡುಬಂದು ರಾಜನ ದರ್ಶನವನ್ನು ಮಾಡಿ, ಧನಕನಕವಸ್ತುಗಳನ್ನು ಕಪ್ಪವಾಗಿ ಕೊಟ್ಟು, ವಿನಯದಿಂದ ಯಥೋಚಿತವಾಗಿ ರಾಜನನ್ನು ಸತ್ಕರಿಸಿದನು. ಕುಸುಮಶ್ರೇಷ್ಠಿಯು ತನ್ನ ಮನಸ್ಸಿಗೆ ಸಂತೃಪ್ತಿಯಾಗುವಂತೆ ಚಕ್ರವರ್ತಿಯನ್ನೂ ಅವನ ಸಕಲ ಪರಿವಾರವನ್ನೂ ನಾನಾವಿಧವಾಗಿ ಉಪಚರಿಸಿ, ದೇವತೆಗಳು ಇಂದ್ರನನ್ನು ಸೇವಿಸುವಂತೆ, ಅವರನ್ನು ಸಂತೋಷಪಡಿಸಿದನು. ಪರಾಕ್ರಮಿಯಾದ ವಿಷ್ಣುವರ್ಧನನು ತಾನು ಸಾಮ್ರಾಟ ನೆಂಬುದನ್ನು ಮನಸ್ಸಿಗೆ ತಾರದೆ ಅಮರಾವತಿಯನ್ನು ಮೀರುವ ಸೌಂದರ್ಯದಿಂದ ಶೋಭಿಸುತ್ತಿದ್ದ ಆ ಪೆನುಗೊಂಡೆಯ ಸೌಂದರ್ಯಕ್ಕೆ ಮಾರುಹೋದನು.

ಅಲ್ಲಿನ ಪ್ರಮುಖರನ್ನು ಕರೆಸಿಕೊಂಡು, "ಈ ನಿಮ್ಮ ಪಟ್ಟಣವು ಶೇಷನ ಫಣಾಮಣಿಯಂತೆ ವಿರಾಜಮಾನವಾಗಿರಲು ಕಾರಣವೇನು?" ಎಂದನು. ಅದಕ್ಕೆ ಅವರು, "ಎಲೈ ಪ್ರಭೋ, ಬ್ರಹ್ಮನ ಸೂಚನೆಯಂತೆ ಚತುರನಾದ ಅಮರಶಿಲ್ಪಿ

ವಿಶ್ವಕರ್ಮನು ಈ ಪಟ್ಟಣವನ್ನು ನಿರ್ಮಾಣಮಾಡಿದನು. ಇದರ ಸೌಂದರ್ಯಾ-ತಿಶಯವನ್ನು ಕಂಡು ಸಂತೃಪ್ತನಾದ ಬ್ರಹ್ಮನು ವೈಶ್ಯರಿಗೆ ಈ ಪಟ್ಟಣವನ್ನು ಒಪ್ಪಿಸಿದನು. ಅಂದಿನಿಂದಲೂ ವೈಶ್ಯರು ಈ ಪಟ್ಟಣವನ್ನು ಮಹಾವೈಭವದಿಂದ ಆಳುತ್ತಿದ್ದಾರೆ" ಎಂದರು. ವಿಷ್ಣುವರ್ಧನನು ನಗರಪ್ರವೇಶವನ್ನು ಮಾಡಿ ಪಟ್ಟಣದ ವೈಭವವನ್ನು ನೋಡಲು ಅಪೇಕ್ಷಿಸಿದನು. ಅದರಿಂದ ಹರ್ಷಿತನಾದ ಕುಸುಮಶ್ರೇಷ್ಠಿಯು ಮಹಾಸಡಗರದಿಂದ ಪಟ್ಟಣವನ್ನೆಲ್ಲಾ ಶೃಂಗಾರಗೊಳಿಸಿ, ಸಕಲಮರ್ಯಾದೆಗಳಿಂದ ರಾಜನನ್ನು ಪಟ್ಟಣಕ್ಕೆ ಬಿಜಯಮಾಡಿಸಿದನು. ನಗರೇಶ್ವರಸ್ವಾಮಿಯ ದರ್ಶನವನ್ನೂ, ಅಭಿಷೇಕ ಅರ್ಚನೆಗಳನ್ನೂ ಏರ್ಪಡಿಸಿ ಸ್ವಾಮಿಗೆ ಭಕ್ತಿಯಿಂದ ನಮಸ್ಕರಿಸಿದನು. ಇದರಿಂದ ಸಂತುಷ್ಟನಾದ ವಿಷ್ಣುವರ್ಧನನು ಕುಸುಮಶ್ರೇಷ್ಠಿಯನ್ನು ವಿಶೇಷವಾಗಿ ಪ್ರಶಂಸಿಸಿ ಮನ್ನಣೆಯನ್ನು ಮಾಡಿದನು.

ಚಾಲುಕ್ಯ ಚಕ್ರವರ್ತಿ ವಿಷ್ಣುವರ್ಧನನು ಪೆನುಗೊಂಡೆಯ ಪಟ್ಟಣವನ್ನು ನೋಡಿಕೊಂಡು ತನ್ನ ರಾಜಧಾನಿಗೆ ಹಿಂದಿರುಗಲು ನಿಶ್ಚಯಿಸಿದನು. ಆಗ ಕುಸುಮ ಶ್ರೇಷ್ಠಿಯು ಬಹಳ ಉತ್ಸಾಹದಿಂದ ಆತನಿಗೆ ಸತ್ಕಾರವನ್ನು ಏರ್ಪಡಿಸಿ ತನ್ನ ಪಟ್ಟಣದಲ್ಲಿ ದೊರಕುವ ಅಮೂಲ್ಯವಾದ ವಸ್ತ್ರಭೂಷಣಗಳನ್ನು ತೆಗೆಸಿಕೊಂಡು ಪತ್ನಿಕುಸುಮಾಂಬ ಮತ್ತು ಸುವಾಸಿನಿಗಳ ಸಹಿತನಾಗಿ ಬಂದನು. ದೇವರನ್ನಾಗಲೀ, ರಾಜರನ್ನಾಗಲೀ ಸಂದರ್ಶಿಸುವ ಸಮಯದಲ್ಲಿ, ಆ ನಗರದಲ್ಲಿರುವ ಕನ್ನಿಕೆಯರ ಸಮೂಹವು ಆಗಮಿಸಿ ಮಂಗಳನೀರಾಜನಗಳನ್ನು ಅರ್ಪಿಸುವುದು ಅಲ್ಲಿನ ರೂಢಿ. ಅದರಂತೆ ವಾಸವೀ ಕುಮಾರಿಯು ಇತರ ಅವಿವಾಹಿತ ಕನ್ಯೆಯರೊಡನೆ ಕೂಡಿಕೊಂಡು ಬಂದು, ಇಂಪಾಗಿ ಹಾಡಿ, ನೀರಾಜನವನ್ನು ಮಹಾಸಂಭ್ರಮ ದಿಂದ ವಿಷ್ಣುವರ್ಧನನಿಗೆ ಕೊಟ್ಟಳು.

ಬಂದವರೆಲ್ಲರೂ ತಾವು ರಾಜನಿಗೆ ಅರ್ಪಿಸಲು ತಂದಿದ್ದ ಉತ್ತಮವಸ್ತ್ರಗಳನ್ನೂ, ಮಾಣಿಕ್ಯವೈಢೂರ್ಯಾದಿಗಳನ್ನೂ ಸಾಲುಗೊಂಡು ಓರಣವಾಗಿ ತಂದಿಟ್ಟರು. ಕನ್ನಿಕೆಯರೂ ಸಹ ನೀರಾಜನಗಳನ್ನು ಇತ್ತರು. ಕನ್ಯೆಯರ ನಡುವೆ ರತ್ನಪ್ರಾಯಳಾಗಿ, ದೇದೀಪ್ಯಮಾನವಾಗಿ ಹೊಳೆಯುತ್ತಿರುವ ಪರಮಸುಂದರಿ ಯಾಗಿದ್ದ ವಾಸವೀ ಕನ್ಯೆಯು ದಿವ್ಯವಾಗಿ ಗಾನವನ್ನು ಮಾಡುತ್ತಾ ರಾಜನಿಗೆ

ನೀರಾಜನವನ್ನು ಅರ್ಪಿಸಿದಳು. ಅವಳನ್ನು ಕಂಡ ವಿಷ್ಣುವರ್ಧನನು ಆ ಸೌಂದರ್ಯನಿಧಿಗೆ ಮಾರುಹೋದನು. ರತಿದೇವಿಯ ಸೌಂದರ್ಯಸಾಕಾರ ಸ್ವರೂಪಿಯಾದ ಈ ಸುಂದರಿಯು ಯಾರಿರಬಹುದು? ಈಕೆಯು ದೇವಕನ್ನಿಕೆ ಇರಬಹುದೇ? ನನ್ನ ಮನಸ್ಸನ್ನು ಆಕರ್ಷಿಸಿ, ಆವರಿಸಿರುವ ಈ ಸೌಂದರ್ಯನಿಧಿ ದೇವತೆಯು ಯಾರೆಂಬುದೇ ಗೊತ್ತಾಗುವುದಿಲ್ಲ. ಇವಳನ್ನು ನೋಡಲು ಮತ್ತೆ ಮತ್ತೆ ಆಸೆಯು ನನ್ನಲ್ಲಿ ಉಕ್ಕುತ್ತಿರುವುದು, ಎಂದುಕೊಂಡು ತನ್ನ ಅನುಚರರನ್ನು, ಈಕೆ ಯಾರೆಂಬುದನ್ನು ತಿಳಿದು ಬರಲು ಕಳುಹಿಸಿದನು. ಅವರು ಹಿಂದಿರುಗಿ ಬಂದು ಈ ಸುಂದರಿಯು ಕುಸುಮಶ್ರೇಷ್ಠಿಯ ಮಗಳು ಎಂದರು.

ವಾಸವಿಯ ಮಧುರಗಾನವನ್ನು ಕೇಳಿ, ಅವಳ ಸೌಂದರ್ಯಕ್ಕೆ ಚಕಿತನಾಗಿ, ಹೃದಯವು ಅನುರಾಗಭಾವದಿಂದ ತಳಮಳಗೊಂಡಿರಲು, ಮೋಹಪರವಶನಾಗಿ ರಾಜನ ಮುಖವು ತನ್ನ ಕಳೆಯನ್ನು ಕಳೆದುಕೊಂಡಿತು. ವಾಸವೀಕನ್ಯೆಯನ್ನು ಪತ್ನಿಯನ್ನಾಗಿ ಪಡೆಯಲು ಉತ್ಸುಕಗೊಂಡನು. ತನ್ನ ಸಮೀಪದಲ್ಲಿದ್ದ ಒಬ್ಬ ಹೆಗ್ಗಡೆಯನ್ನು ಕರೆದು ವಿಷಯವನ್ನು ತಿಳಿದುಕೊಂಡುಬರಲು ಈ ರೀತಿ ಹೇಳಿದನು. "ರೂಪರಾಶಿಯಾಗಿ ಮೆರೆಯುತ್ತಿರುವ ಈ ಕನ್ನಿಕೆಯು ನನ್ನ ಹೃದಯೇಶ್ವರಿಯಾಗಿ ನನ್ನನ್ನು ಆವರಿಸಿಬಿಟ್ಟಿರುವಳು. ಇವಳ ವಿಯೋಗವನ್ನು ನಾನು ಸಹಿಸಲಾರೆನು. ನೀವುಗಳು ಕುಸುಮಶ್ರೇಷ್ಠಿಯಲ್ಲಿಗೆ ಹೋಗಿ, ಅವನನ್ನು ಒಪ್ಪಿಸಿ, ಈ ಕನ್ನಿಕೆಯನ್ನು ನನಗೆ ಲಗ್ನಮಾಡಿಕೊಡಲು ಹೇಳಿ" ಎಂದನು. ಸಚಿವನು ಅರಸನ ಅಪ್ಪಣೆಯನ್ನು ಕುಸುಮಶ್ರೇಷ್ಠಿಯ ಬಳಿ ಬಂದು ವಿಷಯವನ್ನು ತಿಳಿಸಿದನು.

ಅದನ್ನು ಕೇಳಿದ ಕುಸುಮಶ್ರೇಷ್ಠಿಯು ಕೋಪದಿಂದ ತಪ್ತನಾದನು. ಅವನ ಹುಬ್ಬುಗಳು ಗಂಟಿಕ್ಕಿದುವು. ತನ್ನ ರೋಷಾವೇಶದಿಂದ ಸಾಮ್ರಾಟನ ಉದ್ಧಟತನವನ್ನು ಜರೆದನು. ಮನಸ್ಸಿನ ವ್ಯಾಕುಲತೆಯಿಂದಲೂ, ಕೋಪದಿಂದಲೂ ಮುಂಗಾಣದೆ ವ್ಯಗ್ರನಾಗಿ ಆರ್ಭಟಿಸುತ್ತಾ ಬೇಗನೆ ತನ್ನ ಪರಿವಾರದವರ ಸಮೀಪಕ್ಕೆ ಹೋಗಿ, ವಿಷ್ಣುವರ್ಧನನ ಮನೋಗತವನ್ನು ಅವರಿಗೆ ವಿವರಿಸಿದನು. ಕುಸುಮಶ್ರೇಷ್ಠಿಯ ಮಾತನ್ನು ಕೇಳಿದ ವೈಶ್ಯಪ್ರಮುಖರ ಸಭೆಯು ಸಂಕಟಪಟ್ಟಿತು. ಏನೆಂದರೂ ವರ್ಣಸಾಂಕರ್ಯವಾಗುವುದು ಮಹಾದೋಷ. ಅವರು

ಕುಸುಮಾಂಕನಿಗೆ ಈ ವಿವಾಹ ಸಂಬಂಧವು ವೈಶ್ಯಕುಲ ಧರ್ಮವಲ್ಲವೆಂದೂ ಒಪ್ಪಿಸಿ, ಆ ರೀತಿಯಲ್ಲಿಯೇ ವಿಷ್ಣುವರ್ಧನನ ಸಚಿವರಿಗೆ ಹೇಳಲು, ಅವರು ಅಲ್ಲಿಂದ ಹೊರಟರು.

ಸಚಿವರು ಬಂದು, ವಿಷ್ಣುವರ್ಧನನಿಗೆ ನಮಸ್ಕರಿಸಿ, ಕುಸುಮಾಂಕನು ಹೇಳಿದುದನ್ನು ನಿವೇದಿಸಲು, ವಿಷ್ಣುವರ್ಧನನಿಗೆ ಅದನ್ನು ಕೇಳಿ ಮಹಾಕೋಪ ವುಂಟಾಯಿತು. "ಯಾವ ಧರ್ಮಶಾಸ್ತ್ರದಲ್ಲಿಯೂ ಜಾತಿಗಳ ಪರಸ್ಪರ ಬಾಂಧವ್ಯದಿಂದ ದೋಷವು ಉಂಟಾಗುವುದೆಂದು ಹೇಳಿಲ್ಲ. ಈ ಕುಸುಮ ಶ್ರೇಷ್ಠಿಯು ವಾಸವೀ ಕನ್ನಿಕೆಯನ್ನು ನನಗೆ ಲಗ್ನ ಮಾಡಿಕೊಡಲು ಒಪ್ಪಿದರೆ, ಅವನು ನನ್ನಿಂದ ವಿಶೇಷವಾಗಿ ಪುರಸ್ಕೃತನಾಗಿ ರಾಜ್ಯವನ್ನು ಆಳಿಕೊಂಡಿರಬಹುದು. ಹಾಗೆ ಇರಲು ಅವನು ಒಪ್ಪದಿದ್ದ ಪಕ್ಷದಲ್ಲಿ ನಾನು ಯುದ್ಧವನ್ನು ಘೋಷಿಸಿ ಅವರನ್ನು ಸದೆಬಡಿದು ವಾಸವಿಯನ್ನು ಕೊಂಡೊಯ್ಯುವೆನು. ಈ ವಿಷಯವನ್ನು ನಿಮ್ಮ ರಾಜರಾದ ಕುಸುಮಶ್ರೇಷ್ಠಿಯವರಿಗೆ ತಿಳಿಸಿರಿ. ನಾವಿತ್ತ ಗಡುವಿನೊಳಗಾಗಿ ವಾಸವಿಯನ್ನು ತಂದು ಒಪ್ಪಿಸಲಿ. ಯಾರ ಅಭಿಪ್ರಾಯವು ಏನೇ ಇರಲಿ ನಾವು ವಾಸವಿಯನ್ನು ಪಡೆಯದೆ ಹೊರಡುವವರಲ್ಲ. ಅವನು ಉದ್ಧಟನಾಗಿ ನಡೆದರೆ, ಅವನನ್ನು ಸದೆಬಡಿದು, ರಾಜ್ಯವನ್ನು ಕಿತ್ತುಕೊಳ್ಳುವೆನು. ಕುಸುಮಶ್ರೇಷ್ಠಿಯ ಅಭಿಮತವು ಏನೆಂಬುದನ್ನು ನನಗೆ ಒಂದು ವಾರದ ಅವಧಿಯೊಳಗಾಗಿ ತಿಳಿಸಬೇಕು" ಎನ್ನಲು, ಕುಸುಮಶ್ರೇಷ್ಠಿಯ ಸಚಿವರೆಲ್ಲರೂ ಮಹಾಕೋಟಲೆಗೆ ಗುರಿಯಾದರು. ಇತ್ತಕಡೆ ವಿಷ್ಣುವರ್ಧನನು ತನ್ನ ರಾಜಧಾನಿಗೆ ಹಿಂದಿರುಗಿದನು.

ಕುಸುಮಾಂಕನು ಹದಿನೇಳು ನಾಡುಗಳ ವೈಶ್ಯಕುಲಭೂಪಾಲರನ್ನು ಮತ್ತು ವೈಶ್ಯಕುಲಧರ್ಮವನ್ನು ಬಲ್ಲ ವಿದ್ವಾಂಸರನ್ನೂ, ಶಾಸ್ತ್ರಸಂಪನ್ನರಾದ ತನ್ನ ಗುರುವಾದ ಭಾಸ್ಕರಚಾರ್ಯರ ಅಪ್ಪಣೆಯಂತೆ ಶೀಘ್ರದಲ್ಲಿಯೇ ಕರೆಸಿದನು. ಪರಮ ಪಾವನವಾದ ಪೆನುಗೊಂಡೆಯ ನಗರೇಶ್ವರನ ಸನ್ನಿಧಾನದಲ್ಲಿ ಪುರಪ್ರಮುಖರೂ, ವೈಶ್ಯಕುಲದ 714 ಗೋತ್ರದ ಪ್ರಮುಖರೂ ಸಭೆ ಸೇರಿದರು.

ಕುಸುಮಶ್ರೇಷ್ಠಿಯು ಸಭೆಗೆ ಆಗಮಿಸಿದ್ದ ಸಕಲ ನಾಯಕರನ್ನೂ ಕುಶಲ

ಪ್ರಶ್ನೆಮಾಡಿ, ಅವರನ್ನು ಸತ್ಕರಿಸಿ ಆಸನಗಳನ್ನಿತ್ತು, ತಾನು ಪ್ರಸನ್ನಚಿತ್ತನಾಗಿ ಹೇಳಿದನು.

"ಎಲೈ ಭೂಪಾಲಮೌಳಿಗಳೇ, ವೈಶ್ಯಕುಲತಿಲಕರೆ ಕೇಳಿ, ಈಗ ನಿರ್ಣಯಿಸ ಬೇಕಾದ ವಿಷಯವು ಬಹಳ ಗಂಭೀರವಾದುದು. ಜಾತಿಧರ್ಮಗಳಿಗೆ ಸಂಬಂಧಿಸಿದುದು. ಈ ವಿಚಾರದಲ್ಲಿ ನಾನೊಬ್ಬನೇ ನಿರ್ಣಯಕ್ಕೆ ಬರಲು ಅಸಮರ್ಥನಾಗಿರುವೆನು. ನೀವು ಕೂಲಂಕುಷವಾಗಿ ವಿಷಯವನ್ನು ಮಥಿಸಿ ನನಗೆ ಯೋಗ್ಯವಾದ ರೀತಿಯಲ್ಲಿ ಮಾರ್ಗದರ್ಶನ ಮಾಡಿರಿ. ಸಾಮ್ರಾಟನೆನಿಸಿದ ಈ ವಿಷ್ಣುವರ್ಧನನು ಈಗ ಮೊಸಳೆಯು ಗಜೇಂದ್ರನ ಪಾದವನ್ನು ಹಿಡಿದಂತೆ ಹಠಮಾರಿಯಾಗಿ ಸಂಪ್ರದಾಯಕ್ಕೆ ವಿರುದ್ಧವಾಗಿ ತಾನು ನಮ್ಮ ವಾಸವೀ ಕುಮಾರಿಯನ್ನು ಪಾಣಿಗ್ರಹಣಮಾಡಿಕೊಳ್ಳಲು ದೃಢನಿಶ್ಚಯವುಳ್ಳವನಾಗಿರುವನು. ಶ್ರೀಹರಿಯೇ ಗಜೇಂದ್ರನನ್ನು ಸಂರಕ್ಷಿಸಿದ ರೀತಿಯಲ್ಲಿ, ನೀವು ನನಗೆ ಒದಗಿರುವ ಸಂದಿಗ್ಧ ಪರಿಸ್ಥಿತಿಯು ಪರಿಹಾರವಾಗುವಂತೆ, ನಮ್ಮ ಸಂಪ್ರದಾಯ ಆಚರಣೆಗಳಿಗೆ ವಿರೋಧವಾಗದಂತೆ, ವೈಶ್ಯಕುಲಧರ್ಮದಂತೆ, ಸಮ್ಮತವಾಗುವ ರೀತಿಯಲ್ಲಿ ನೀತಿಯನ್ನು ತಿಳಿಸಿರಿ. ಈ ಸಭೆಯಲ್ಲಿ ಸಮಾವೇಶಗೊಂಡಿರುವ ನೀವೆಲ್ಲರೂ ಧರ್ಮಾಚರಣೆಯುಳ್ಳವರು. ವೈಶ್ಯಕುಲದ ಆಚಾರದಲ್ಲಿ ನಿಷ್ಠರು. ಈ ನನ್ನ ವಿಷಮಪರಿಸ್ಥಿತಿಯಲ್ಲಿ ಯಾವರೀತಿ ನಡೆದುಕೊಳ್ಳಲು ನನಗೆ ಯೋಗ್ಯವೆಂಬುದನ್ನು ಶೀಘ್ರವಾಗಿಯೇ ನಿರ್ಣಯಿಸಿರಿ. ವಾಸವೀಕನ್ನಿಕೆಯು ದೇವಿಯ ಅಂಶಸಂಭೂತಳು. ಧರ್ಮರಕ್ಷಣೆಗಾಗಿ ಅವತರಿಸಿದವಳು. ಅಂತಹವಳನ್ನು ನಾನು ಸಾಮ್ರಾಟನ ಸೇವೆಗೆ ಒಪ್ಪಿಸುವುದು ಸರಿಯಾದೀತೇ? ನನಗೆ ಒದಗಿರುವ ಈ ವಿಪತ್ತನ್ನು ನೀವು ಬಗೆಹರಿಸಬೇಕು" ಎಂದು ಕುಸಮಾಂಕನು ವೈಶ್ಯಕುಲ ನಾಯಕರ ಸಭೆಯನ್ನು ಪ್ರಾರ್ಥಿಸಿದನು.

ಕುಸುಮಾಂಕನ ಮಾತನ್ನು ಕೇಳಿ ಹಲವರು ಅವನ ಮಾತು ಲೇಸೆಂದು ಮೆಚ್ಚಿ ಪ್ರಶಂಸಿಸಿದರು ಮತ್ತೆ ಹಲವರು ವಿಷ್ಣುವರ್ಧನನ ವರ್ತನೆಯು ಹೇಯವಾದುದು ಎಂದು ಕೋಪದಿಂದ ಹಲ್ಲುಗಳನ್ನು ಕಡಿದರು. ಇನ್ನೂ ಅನೇಕರು ಈ ಸಂಬಂಧವು

ಯೋಗ್ಯವಲ್ಲ ಇದರಿಂದ ವೈಶ್ಯಕುಲಧರ್ಮಗಳು ಕೆಡುವುದು, ಅದರ ಹಾನಿಯಾಗುವುದು ಎಂದರು. 612 ಗೋತ್ರದ ವೈಶ್ಯರು ಹತಮಾರಿಗಳಾಗಿ ಏನನ್ನೂ ನುಡಿಯದೆ ಸುಮ್ಮನಿದ್ದರು. ಉಳಿದ 102 ಗೋತ್ರಗಳ ವೈಶ್ಯರಲ್ಲಿ ಯಾವ ಒಂದು ಖಚಿತವಾದ ಅಭಿಪ್ರಾಯವೂ ಕಾಣಿಸದೆ, ಅವರವರಲ್ಲಿಯೇ ವಾದವಿವಾದಗಳು ನಡೆದುವು. ನೂರೆರಡು ಗೋತ್ರ ಸಂಭವರಾದ ವೈಶ್ಯರೆಲ್ಲರೂ ಪರಶಿವನನ್ನು ಧ್ಯಾನಿಸುತ್ತಾ, ತಲೆಗಳನ್ನು ತಗ್ಗಿಸಿಕೊಂಡು, ಧರ್ಮಾಚರಣೆ ಯಲ್ಲಿಯೇ ಮನಸ್ಸುಳ್ಳವರಾಗಿ, ಏಕಕಂಠದಿಂದ, “ಎಲೈ ವೈಶ್ಯರೆ, ವಿಚಾರ ಮಾಡಿದರೆ ನಾವೆಲ್ಲರೂ ಮಹಾಮಹಾ ಋಷಿಗಳ ಗೋತ್ರಪರಂಪರೆಯನ್ನು ಹೊಂದಿದವರು. ಉತ್ತಮ ಪಾವಿತ್ರ್ಯವನ್ನು ಹೊಂದಿದ ವಂಶದಲ್ಲಿ ಹುಟ್ಟಿರುವವರು. ಧರ್ಮದ ಆಚಾರಗಳನ್ನೂ, ಶಾಸ್ತ್ರವನ್ನು ಗಮನಿಸಿದಾಗ ಈ ವಿಷ್ಣುವರ್ಧನದೊರೆಯ ಸಂಬಂಧವು ನಮಗೆ ಯೋಗ್ಯವಲ್ಲ. ವಿಷ್ಣುವರ್ಧನನು ಏನಾದರು ದುಡುಕಿ ಒಂದುವೇಳೆ ನಮ್ಮ ಮೇಲೆ ಧಾಳಿ ನಡೆಸಿದರೆ, ನಾವೆಲ್ಲರೂ ಕೂಡಿ ಭುಜಕ್ಕೆ ಭುಜವನ್ನು ಕೊಟ್ಟು ನಮ್ಮ ಧರ್ಮ ಸಂರಕ್ಷಣೆಗಾಗಿ ಹೋರಾಡಿ, ಒದಗುವ ಕಠಿಣ ಪರಿಸ್ಥಿತಿಯನ್ನು, ಎಂಥಹ ತ್ಯಾಗವನ್ನು ಮಾಡಬೇಕಾದರೂ ಲೆಕ್ಕಿಸದೆ, ಹೋರಾಡಿ ಜಯವನ್ನು ಸಂಪಾದಿಸೋಣ. ಪರಿಸ್ಥಿತಿಗೆ ಹೆದರಿ ಭೀರುಗಳಂತೆ ಶರಣಾಗುವುದು ಸರ್ವಥಾ ಯೋಗ್ಯವಲ್ಲ.” ಎಂದು ತಮ್ಮ ನಿರ್ಧಾರವನ್ನು ಅವರು ಘೋಷಿಸಿದರು.

102 ಗೋತ್ರದ ವೈಶ್ಯಕುಲನಾಯಕರ ಈ ನಿರ್ಧಾರವನ್ನು ಕೇಳಿ 612 ಗೋತ್ರದ ವೈಶ್ಯಸ್ತೋಮವು, ಮದವೇರಿದ ಆನೆಗಳಂತೆ ಕೋಪಗೊಂಡು ನಾನಾ ವಿಧವಾಗಿ ಮಾತನಾಡುತ್ತಾ, ಪರಿಸ್ಥಿತಿಯನ್ನು ಕ್ಷೋಭೆಗೊಳಿಸಿ, 102 ಗೋತ್ರದ ವೈಶ್ಯರಿಗೆ ಹೇಳಿದರು. “ಈಗ ಒದಗಿಬಂದಿರುವ ವಿಷ್ಣುವರ್ಧನ ಮಹಾರಾಜನ ಸಂಬಂಧವು ನಮಗೆ ದೈವದತ್ತವೇ ಸರಿ. ಅದನ್ನು ಉದಾರಭಾವದಿಂದ ನಾವು ಅಂಗೀಕರಿಸ ಬೇಕು. ಈ ರಾಜಬಾಂಧವ್ಯದಿಂದ ನಮ್ಮ ವೈಶ್ಯಕುಲದ ಗೌರವ, ಘನತೆಗಳು ಹೆಚ್ಚುವುವು. ಸಾಮ್ರಾಟನು ನಮ್ಮ ವಂಶಕ್ಕೆ ಅಳಿಯನಾಗುವನು. ವಿಚಾರವು ಹೀಗಿರುವಾಗ ವಾಸವೀಕನ್ಯೆಯನ್ನು ವಿಷ್ಣುವರ್ಧನ ಮಹಾರಾಜನಿಗೆ ಲಗ್ನ

ಮಾಡಿಕೊಡುವುದು ಒಳ್ಳೆಯದೇ. ಮೂರ್ಖರಂತೆ ವರ್ತಿಸಿ, ಈ ಸಂಬಂಧವನ್ನು ನಿರಾಕರಿಸುವುದು ಯೋಗ್ಯವಲ್ಲ. ಈ ಸಂಬಂಧದಿಂದ ನಮಗೆ ಒಳ್ಳೆಯದೇ ಆಗುವುದು. ತಾನಾಗಿಯೇ ಮೆಚ್ಚಿಬಂದ ವಿಷ್ಣುವರ್ಧನ ಮಹಾರಾಜನ ನಡತೆಯು ಶ್ಲಾಘ್ಯವೇ ಸರಿ. ವಿಚಾರ ಮಾಡಿದರೆ ಕುಸುಮಶ್ರೇಷ್ಠಿಯು ತನ್ನ ಮಗಳನ್ನು ರಾಜನಿಗೆ ಕೊಡುವುದು ಸರಿ."

ಈ ರೀತಿಯಲ್ಲಿ ನಾನಾವಿಧವಾದ ಪ್ರತಿಭಟನೆಗಳು ಕಾಣಿಸಿಕೊಂಡು, ವಿರುದ್ಧ ಗುಂಪಿನವರು ಕೂಗಾಡುತ್ತಾ, ಗರ್ವೋನ್ಮತ್ತರಾಗಿ ಬಾಯಿಗೆ ಬಂದಂತೆ ಮಾತನಾಡುತ್ತಿರಲು, ಅವರ ವಾಗ್ಬಾಣಗಳಿಂದ ನಿರ್ಣಯಿಸಬೇಕಾದ ವಿಚಾರವು ಅಲ್ಲಿಂದಿಲ್ಲಿಗೆ ಕಾಲಿನಿಂದ ಒದೆಯಲ್ಪಟ್ಟ ಚೆಂಡಿನಂತೆ ಅಡ್ಡಾಡುತ್ತಿದ್ದಿತು. ಈ ಬಗೆಯ ಪರಸ್ಪರ ಹೋರಾಟದಿಂದ ಕುಸುಮಾಂಕನು ಚಿಂತೆಗೀಡಾದನು. ಅವನಿಗೆ ಯಾವ ಪರಿಹಾರವೂ ಗೋಚರವಾಗದೆ, ಧರ್ಮರಕ್ಷಣೆಗೆ ಒದಗಿದ ಆಪತ್ತನ್ನು ಯೋಚಿಸುತ್ತಾ ಚಿಂತಾಕ್ರಾಂತನಾಗಿ, ತನ್ನ ಮನಸ್ಸಿನ ದುಃಖವನ್ನು ಬಿಚ್ಚುಮನಸ್ಸಿನಿಂದ ತೋಡಿಕೊಂಡನು. "ಇದುವರೆಗೂ ನಮಗೆ ಎಷ್ಟೇ ವಿಪತ್ಪರಂಪರೆಗಳು ಬಂದರೂ ಸಹ, ನಾನು ವೈಶ್ಯ ಕುಲಧರ್ಮವನ್ನೇ ನಂಬಿ, ಏಕಪ್ರಕಾರದಿಂದ ಅದನ್ನು ಕಾಪಾಡಿಕೊಂಡು ಉಳಿಸಿಕೊಂಡಿರುವೆನು. ಈಗ ಸತ್ಯಾಚರಣೆಗೆ ಸಮ್ಮತವಾಗದ ಅಭಿಪ್ರಾಯವನ್ನು ಕೇಳಿ ನನ್ನ ಮನಸ್ಸು ನೋಯುತ್ತಿದೆ. ನಾನು ಅಗ್ನಿ ಪ್ರವೇಶವನ್ನು ಮಾಡಿ ನನ್ನ ಪ್ರಾಣವನ್ನು ನೀಗುವೆನು. ನನಗೆ ವೈಶ್ಯ ಕುಲಧರ್ಮವೇ ಹೆಚ್ಚು. ನನ್ನ ಪ್ರಾಣವು ತೃಣಕ್ಕೆ ಸಮಾನ" ಎಂದು ನಿರ್ಧಾರಮಾಡಿ ಪ್ರತಿಜ್ಞೆಯನ್ನು ಕೈಗೊಂಡನು.

ಕುಸಮಶ್ರೇಷ್ಠಿಯ ಪ್ರತಿಜ್ಞೆಯನ್ನು ಕೇಳಿ 102 ಗೋತ್ರದ ವೈಶ್ಯಕುಲದವರು ಅವನ ಮಾತನ್ನು ಅನುಮೋದಿಸಿ, ಶೀಘ್ರದಲ್ಲಿಯೇ ತಾವೂ ಆವೇಶಗೊಂಡು ಅವನಂತೆಯೇ ಪ್ರತಿಜ್ಞೆಗಳನ್ನು ಮಾಡಿ ಹೇಳಿದರು. "ಎಷ್ಟೇ ಕಷ್ಟವಾದರೂ ಕುಲಧರ್ಮದಾಚಾರ ಗಳನ್ನು ರಕ್ಷಿಸುವುದು ನಮಗೆ ಮುಖ್ಯವಾದುದು. ನಾವೂ ಸಹ ನಮ್ಮ ಪ್ರಾಣಗಳನ್ನು ಲೆಕ್ಕಿಸದೆ ಅಗ್ನಿಪ್ರವೇಶಮಾಡುವೆವು" ಎನ್ನಲು ಕುಸುಮಾಂಕನ ಮನಸ್ಸಿಗೆ ಹರ್ಷವಾಯಿತು. 102 ಗೋತ್ರದವರ ಪ್ರತಿಜ್ಞೆಯನ್ನು ಕೇಳಿದ 612 ಗೋತ್ರಗಳ ವೈಶ್ಯಕುಲದವರೂ ಗರ್ವದಿಂದ ಅವರನ್ನು ದೂಷಣೆಮಾಡಿ, ಹಾಸ್ಯ

ಮಾಡಿ, ಕೋಪ ಗೊಂಡು, ಅವರ ನಿರ್ಧಾರವನ್ನು ಪ್ರತಿಭಟಿಸಿದರು. ಅವರೆಲ್ಲರೂ ಕೂಡಿಕೊಂಡು ಎದ್ದು ತಮ್ಮ ಪ್ರಾಣ ಸಂರಕ್ಷಣೆಯನ್ನೇ ಮುಖ್ಯವಾಗಿ ಚಿಂತಿಸಿ, ವೈಶ್ಯಕುಲಧರ್ಮವನ್ನು ತಿಳಿಗೇಡಿಗಳಂತೆ ಅಲ್ಲಗಳೆದು, ತಾವುಗಳು ಪ್ರಾಣಸಂರಕ್ಷಣೆಯ ಮಾರ್ಗವನ್ನು ಹಿಡಿದರು.

ಆ ಸಮಯದಲ್ಲಿ ಕುಸಮಶ್ರೇಷ್ಠಿಯು ಆತುರಾತುರದಿಂದ ತನ್ನ ಅಂತಃಪುರವನ್ನು ಪ್ರವೇಶಿಸಿ ತನ್ನ ಮನಸ್ಸಿನ ಸಂಕಟದಲ್ಲಿ ಮಗಳ ಅಭಿಪ್ರಾಯವನ್ನು ತಿಳಿಯಬೇಕೆಂದು ವಾಸವೀದೇವಿಯ ಬಳಿಗೆ ಹೋಗಿ, ಅವಳನ್ನು ಮುದ್ದಿಸುತ್ತಾ "ಮಗು, ಏನೆಂದು ಹೇಳುವುದು. ನಾನು ಬಹಳ ಚಿಂತಾಕ್ರಾಂತನಾಗಿರುವೆನು. ಬಂಧುಮಿತ್ರವರ್ಗಗಳಲ್ಲಿ ವಿರೋಧವು ಕಾಣಿಸಿರುವುದು. ನಿನ್ನ ವಿವಾಹದ ವಿಷಯದಲ್ಲಿ ಅವರು, ಯಾವುದನ್ನೂ ನಿರ್ಣಯಿಸದೆ, ಒಬ್ಬರು ಬೇರೊಬ್ಬರನ್ನು ದೂಷಿಸುತ್ತಿರುವರು". "102 ಗೋತ್ರದ ವೈಶ್ಯಕುಲದವರು ಈ ರಾಜಸಂಬಂಧವು ನಮಗೆ ಯೋಗ್ಯವಲ್ಲ, ಆಗಕೂಡದು ಎಂದು ಒಮ್ಮತದಿಂದ ನುಡಿದರೆ, 612 ಗೋತ್ರದವರು ಹಠಮಾರಿಗಳಾಗಿ ಈ ರಾಜಸಂಬಂಧ ದಿಂದ ನಮಗೆ ಸಂಪತ್ತು ಕೀರ್ತಿ, ಪ್ರತಿಷ್ಠೆಗಳೂ ಹೆಚ್ಚುವುದೆಂದೂ, ವಿಷ್ಣುವರ್ಧನನ ಸಂಬಂಧಕ್ಕೆ ಒಪ್ಪುವುದೇ ಸರಿಯೆಂದು ಮಾತನಾಡುತ್ತಿರುವರು. ಅಹೋರಾತ್ರಿಗಳು ಚರ್ಚಿಸಿದರೂ ಸಹ ತಂತಮ್ಮ ಅಭಿಪ್ರಾಯಗಳೇ ಸರಿಯೆಂಬ ಹಠದಿಂದ ಅವರು ಈ ವಿಚಾರವನ್ನು ಬಗೆಹರಿಸದೆ ಇರುವರು. 102 ಗೋತ್ರಗಳ ವೈಶ್ಯರು ತಾವು ಅಗ್ನಿ ಪ್ರವೇಶವನ್ನು ಮಾಡಿ ಪ್ರಾಣತ್ಯಾಗಮಾಡುವುದೇ ಹೊರತು ವರ್ಣಸಂಕರಕ್ಕೆ ಎಡೆಯಿತ್ತು ತಮ್ಮ ಕುಲದ ಪಾವಿತ್ರ್ಯವನ್ನು ಭಂಗಗೊಳಿಸಲಾರರು. 612 ಗೋತ್ರದವರು ತಮ್ಮ ನೀತಿಯಿಂದ ನಮ್ಮ ಕುಲಗಳ ಪಾವಿತ್ರ್ಯವನ್ನು ನಾಶಮಾಡುತ್ತಾ ನಮ್ಮನ್ನು ಸಂಕಟಕ್ಕೆ ಈಡುಮಾಡಿರುವರು. ಮಗು, ನಿನ್ನ ಮನಸ್ಸಿನ ಅಭಿಪ್ರಾಯವೇನು? ಏನು ಮಾಡಬೇಕೆಂದು ನೀನು ಆಲೋಚಿಸಿರುವೆ ತಿಳಿಸು" ಎಂದನು.

ವಾಸವಿಯು ತಂದೆಯ ಮಾತುಗಳನ್ನು ಗಮನವಿಟ್ಟು ಕೇಳಿದಳು. ಅವಳ ಮನಸ್ಸು ಕಳವಳಗೊಂಡಿತು. ತಂದೆಗೆ ವಿನಯದಿಂದ ನಮಸ್ಕರಿಸಿ ಹೇಳಿದಳು,

"ಅಪ್ಪಾ! ನಿನಗೆ ಈಗ ಪ್ರಾಪ್ತವಾಗಿರುವ ಸಂಕಟವನ್ನು ನಾನು ಬಲ್ಲೆ. ಏನಾದರೂ ಸಹ ತಮ್ಮ ಧೈರ್ಯೋತ್ಸಾಹಗಳಿಂದಲೂ, ತ್ಯಾಗಶೀಲತೆಯಿಂದಲೂ ನಮಗೆ ಸಹಾಯಕರಾಗಿ ನಿಂತ 102 ಗೋತ್ರದ ವೈಶ್ಯರುಗಳ ಸದ್ಭಾವವನ್ನು ಮೆಚ್ಚಲೇ ಬೇಕು. ಅವರು ನಮಗೆ ಪೂಜ್ಯರೇ ಸರಿ. ಆದರೆ ಮುಖ್ಯವಾಗಿ ನಿನಗೆ ನನ್ನ ನಿಜಸ್ಥಿತಿಯು ಗೊತ್ತಾಗಿಲ್ಲವೆಂದು ಕಾಣುವುದು. "ನಾನು ಆದಿಶಕ್ತಿ ಸ್ವರೂಪಿಣಿಯಾದ ಭಗವತಿಯು, ವೈಶ್ಯಕುಲದ ಸಂಕಟವನ್ನು ಪರಿಹಾರಮಾಡುವ ಭಕ್ತ ಸಂರಕ್ಷಿಣಿಯು. ಈಗ ವಿಷ್ಣುವರ್ಧನ ಮಹಾರಾಜನು ವೈಶ್ಯಕುಲಕ್ಕೆ ಅಪಚಾರಮಾಡಿರುವನು. ಆ ದುಷ್ಟನನ್ನು ಕೊಂದು ವೈಶ್ಯರನ್ನು ಕಾಪಾಡಲು ನನ್ನ ಮಹಿಮಾವಿಶೇಷಗಳನ್ನು ಪ್ರಕಟಪಡಿಸುವೆನು. ಈಗ ಒದಗಿರುವ ಸಂಕಟಕ್ಕೆ ನೀವು ಚಿಂತಿಸಬೇಕಾಗಿಲ್ಲ". ಹೀಗೆ ಸೂಚಿಸಿ ವಾಸವೀದೇವಿಯು ತನ್ನ ನಿಜಸ್ವರೂಪವನ್ನು ಪ್ರಕಟಪಡಿಸಿದಳು.

ದೇವಿಯು ಪ್ರಸನ್ನ ಗಂಭೀರವಾದ ಮುಖಕಮಲದಿಂದಲೂ, ಕೃಪಾಪೂರ್ಣ ವಾದ ಕಟಾಕ್ಷದಿಂದಲೂ, ತನ್ನ ಕಾಂತಿಯಿಂದ ದೇದೀಪ್ಯಮಾನವಾದ ಮಣಿಕಿರೀಟ ಹಾರಕಡಗಗಳ ಭೂಷಣದಿಂದಲೂ, ದಿವ್ಯವಾದ ಶರೀರಕಾಂತಿಯಿಂದಲೂ ಬೆಳಗುತ್ತಾ ಆದಿಶಕ್ತಿಸ್ವರೂಪಿಣಿಯಾದ ಶಾಂಭವಿಯಾಗಿ ಪ್ರಕಟಗೊಂಡಳು. "ಎಲೈ! ಪಾವನಚರಿತ್ರವಾದ ವೈಶ್ಯಮಹಾಜನರೆ, ನನ್ನ ಮಾತನ್ನು ಸ್ವಲ್ಪ ಕೇಳಿರಿ. ನನ್ನನ್ನು ಎಲ್ಲರಂತೆ ಸಾಮಾನ್ಯ ಮನುಷ್ಯಳೆಂದು ತಿಳಿಯದಿರಿ. ಪಾಪಿಷ್ಠನೂ ತಿಳಿಗೇಡಿಯೂ ಆದ ವಿಷ್ಣುವರ್ಧನನು ನನ್ನನ್ನು ದಿಟ್ಟಿಸಿ ನೋಡಿರುವುದರಿಂದ ನಾನು ಅಪವಿತ್ರಶರೀರಿಯಾಗಿರುವೆನು. ಆದುದರಿಂದ ಪಾವನವಾದ ಅಗ್ನಿಯನ್ನು ಪ್ರವೇಶ ಮಾಡಿ ನಾನು ಈ ದೇಹವನ್ನು ಬಿಡಲು ನಿಶ್ಚಯಿಸಿರುವೆನು. ಶೋಕಸಾಗರದಲ್ಲಿ ಮುಳುಗಿರುವುದು ಯೋಗ್ಯವಲ್ಲ. ಅಗ್ನಿ ಶುದ್ಧಳಾಗಿ ಸಾಯುಜ್ಯ ಪದವಿಯನ್ನು ಸೇರುವೆನು. ಪಾಪಿ ವಿಷ್ಣುವರ್ಧನ ರಾಜನು ನಿಮಗೆ ಕೇಡನ್ನು ಮಾಡಲು ಸಾಧ್ಯವಾಗುವುದಿಲ್ಲ. ಸೀತಾಮಾತೆಯನ್ನು ಕದ್ದೊಯ್ದ ರಾವಣನಿಗೆ ಯಾವಗತಿಯಾಯಿತೋ, ದಮಯಂತಿಯನ್ನು ಅಪೇಕ್ಷಿಸಿದ ಬೇಡನಿಗೆ ಯಾವಗತಿಯಾಯಿತೋ, ದ್ರೌಪದಿಯನ್ನು ಸೆಳೆದ ಕೀಚಕನಿಗೆ ಯಾವಗತಿ ಯಾಯಿತೋ ಅದೇ ಗತಿಯೇ ಈ ವಿಷ್ಣುವರ್ಧನನಿಗೂ ಆಗುವುದು. ಇವನೂ ಸಹ

ನಾಶವಾಗುವನು".

"ಪಂಚಭೂತಗಳಿಂದಾದ ಈ ಶರೀರವು ಎಂದಾದರೂ ನಾಶವಾಗತಕ್ಕುದೆ. ಇದನ್ನು ನಂಬಿಕೊಂಡಿರುವುದು ಭ್ರಾಂತಿಯೇ ಸರಿ. ಇದರ ರೂಪರಾಶಿಯನ್ನು ನೋಡಿ ಮೋಹಗೊಂಡು, ಈ ರಾಜನು ಮುಂಗಾಣದೆ ದುಡುಕಿರುವನು. ಅವನ ದೃಷ್ಟಿಯಿಂದ ಅಪವಿತ್ರವಾಗಿರುವ ಈ ದೇಹವನ್ನು ದಹಿಸಲೇಬೇಕು. ನಾನು ದೇಹತ್ಯಾಗಮಾಡಿ ಶ್ರೀಶೈಲಕ್ಷೇತ್ರದಲ್ಲಿ ನೆಲೆಸುವೆನು. ನನ್ನನ್ನು ಪಡೆಯಲು ಸಂಚುಮಾಡುತ್ತಿರುವ ವಿಷ್ಣುವರ್ಧನರಾಜನು ನನ್ನ ಮರಣವಾರ್ತೆಯನ್ನು ಕೇಳಿದ ತತ್‌ಕ್ಷಣದಲ್ಲಿಯೇ ತಲೆಯೊಡೆದು ಸಾಯುವನು. ಇದರಲ್ಲಿ ಸ್ವಲ್ಪವಾದರೂ ಸಂದೇಹಕ್ಕೆ ಆಸ್ಪದವಿಲ್ಲ. ಮತ್ತೆ ನನ್ನನ್ನು ಹಿಂಬಾಲಿಸಿ ಉತ್ತಮ ವೈಶ್ಯಕುಲದ ದಂಪತಿಗಳು, ಮನಶ್ಶುದ್ಧಿಯಿಂದ 'ಶಿವಾರ್ಪಣ'ವೆನ್ನುತ್ತಾ ಓಂಕಾರವನ್ನು ಘೋಷಿಸುತ್ತಾ ಅಗ್ನಿ ಪ್ರವೇಶಮಾಡಬೇಕು. ಇದರಿಂದ ಲೋಕಪಾವನವಾದ ಕೀರ್ತಿಯು ಮತ್ತು ಸದ್ಗತಿಯೂ ಅವರಿಗೆ ಕೂಡಿಬರುವುದು. ವೈಶ್ಯರಕುಲದ ಏಳಿಗೆಯೂ ಆಗುವುದು. ಅತ್ತ ಕಡೆ ವಿಷ್ಣುವರ್ಧನ ರಾಜನ ಸಕಲ ಸೇನಾಬಲವೂ ನಾಶವಾಗುವುದು. ಇದು ಖಂಡಿತ" ಎಂದು ಹೇಳಿ ವಾಸವೀದೇವಿಯು ತನ್ನ ಮುನ್ನಿನಸ್ವರೂಪವನ್ನು ಹೊಂದಿದಳು.

ಕುಸುಮಶ್ರೇಷ್ಠಿಯು ಸಂತೋಷಾತಿಶಯದಿಂದ ಹಿಗ್ಗಿದನು. ಅವನ ಮನಸ್ಸಿನಲ್ಲಿಯೇ ಒಂದು ಹೊಸಬಗೆಯ ಚೈತನ್ಯವು ಕಾಣಿಸಿತು. ಶೌರ್ಯ, ಧೈರ್ಯ, ಉತ್ಸಾಹ, ತ್ಯಾಗಗಳಿಂದ ಕೂಡಿ ದೈವಶಕ್ತಿಯನ್ನು ಹೊಗಳಿ, ತನ್ನ ಜನ್ಮವು ಸಾರ್ಥಕವಾಯಿತೆಂದು ಭಾವಿಸಿದನು. ಚಾಣಾಕ್ಷನಾದ ವೈಶ್ಯವೃದ್ಧನೊಬ್ಬನನ್ನು ಕರೆಸಿ, ಅವನಿಗೆ, "ನೀನು ವಿಷ್ಣುವರ್ಧನ ರಾಜನ ಬಳಿಗೆ ಹೋಗಿ ಉಚಿತರೀತಿಯಿಂದ ಈ ಸಂಬಂಧವು ಸರಿಯಲ್ಲ. ಇದರಿಂದ ನಿನಗೆ ರಾವಣಾಸುರನಿಗೆ ಒದಗಿದ ಗತಿಯು ಪ್ರಾಪ್ತವಾಗುವುದು ಎಂದು ತಿಳಿಸಬೇಕು". ಎಂದು ಅಪ್ಪಣೆಯನ್ನು ಮಾಡಿದನು. ಅನಂತರ ವೈಶ್ಯಕುಲಗೋತ್ರದವರನ್ನು ಕರೆಸಿಕೊಂಡು, ಅವರಿಗೆ ತನ್ನ ಅಭಿಪ್ರಾಯವನ್ನು ಒಪ್ಪುವಂತೆ ತಿಳಿಸಿ, "ಪ್ರತಿಗೋತ್ರದಲ್ಲಿಯೂ ಒಬ್ಬೊಬ್ಬರು ಕುಲದಲ್ಲಿನ ಹಿರಿಯದಂಪತಿಗಳು ಒಬ್ಬರು

ಮಾತ್ರವೇ ಅಗ್ನಿಪ್ರವೇಶಮಾಡಬೇಕು. ಈ ಮಾತಿನ ರಹಸ್ಯವನ್ನು ನೀವು ಗಮನಿಸದಿದ್ದರೆ ವೈಶ್ಯವಂಶವು ಭಂಗವಾಗುವುದು" ಎಂದು ಹೇಳಿದನು. ಅದನ್ನು ಕೇಳಿ 102 ಗೋತ್ರದ ವೈಶ್ಯಕುಲದವರು ಗುಂಪುಗೂಡಿಕೊಂಡು ಕುಸುಮಶ್ರೇಷ್ಠಿಯ ಮಾತನ್ನು ಪಾಲಿಸಲು ಮುಂದೆ ಬಂದರು. ಉಳಿದ 612 ಗೋತ್ರದ ವೈಶ್ಯಕುಲದವರು ವಾಸವೀದೇವಿಯನ್ನು ನಿಂದಿಸುತ್ತಾ, ದ್ವೇಷಭಾವದಿಂದ ಕೂಡಿ ದಿಕ್ಕುದಿಕ್ಕುಗಳಿಗೆ ಚೆದುರಿ ಹೊರಟುಹೋದರು.

ನೂರಾಮೂರು ಅಗ್ನಿಕುಂಡಗಳು ಸಾಲಾಗಿ ರಚಿತವಾದವು. ನಗರವನ್ನೆಲ್ಲಾ ಸಿಂಗರಿಸಿದರು. ಅಂಜಲೀಬದ್ಧರಾಗಿ ಎಲ್ಲರೂ ಕೂಡಿ ಉತ್ಸಾಹದಿಂದ ಪಾರ್ವತೀ ಪರಮೇಶ್ವರರನ್ನು ಸ್ತುತಿಸುತ್ತಿದ್ದರು. ಆಗ ಪೆನುಗೊಂಡೆನಗರವು ಬೇರೆ ಕೈಲಾಸವೋ ಎಂಬಂತೆ ಮೆರೆಯುತ್ತಿದ್ದಿತು. ಅದನ್ನು ಕಂಡು ವಿಷ್ಣುವರ್ಧನನು ಹಿಂದೆ ಬಿಟ್ಟುಹೋಗಿದ್ದ ಅವನ ಸೈನ್ಯದವರೂ ಸಹ, ದೇವಿಯ ಮಹಾತ್ಮೆಯನ್ನು ಕಂಡು, ಭಯಭಕ್ತಿಯಿಂದ ವಾಸವಿಯನ್ನು ಸ್ತೋತ್ರಮಾಡುತ್ತಿದ್ದರು. ಮೂರ್ಖನಾದ ವಿಷ್ಣುವರ್ಧನನ ನಡತೆಗೆ ಹೇಸಿ ವೈಶ್ಯಕುಲದವರ ತ್ಯಾಗ, ಧರ್ಮ, ಶ್ರದ್ಧೆ, ಸಾಹಸಗಳನ್ನು, ಅರಿತು, ಮೆಚ್ಚಿ, ಹರ್ಷದಿಂದ ಕೊಂಡಾಡಿದರು. ಪರಮೇಶ್ವರನ ಪಾದಕಮಲಗಳನ್ನು ನಿಶ್ಚಲವಾಗಿ ನಂಬಿ ಪರಮಸದ್ಭಕ್ತಿಯಿಂದ ಶಿವನಾಮ ಸಂಕೀರ್ತನೆಯನ್ನು ಮಾಡುತ್ತಾ ಭಕ್ತಿಪರವಶರಾದರು.

ಕುಸುಮಶ್ರೇಷ್ಠಿಯ ಸಂದೇಶವನ್ನು ಕೊಂಡೊಯ್ದು ದೂತನು ವಿಷ್ಣುವರ್ಧನ ರಾಜನ ಬಳಿಗೆ ಹೋಗಿ, "ಎಲೈ, ಪ್ರಭುವೇ ನಿನ್ನ ವರ್ತನೆಯಿಂದ ಕೇಡನ್ನು ತಂದುಕೊಂಡಿರುವೆ. ನೀನು ವೈಶ್ಯಕುಲದ ಆಚಾರವನ್ನು ತಿಳಿದಿರಬೇಕು. ನೀನು ರಾಜನಾದುದರಿಂದ ಧರ್ಮವನ್ನೂ ನ್ಯಾಯವನ್ನೂ ರಕ್ಷಿಸಬೇಕು. ಅವುಗಳನ್ನು ಭಂಗಮಾಡಬಾರದು. ನನ್ನ ಮಾತಿನ ಮಹತ್ವವನ್ನು ವಿವೇಚಿಸಿ, ನಿನ್ನ ದುರ್ವ್ಯಸನವನ್ನು ತ್ಯಜಿಸು. ಯೋಗ್ಯವಾದ ರೀತಿಯಲ್ಲಿ ರಾಜ್ಯವನ್ನು ರಕ್ಷಿಸು" ಎಂದು ವೈಶ್ಯಕುಲವೃದ್ಧನು ತಿಳಿಸಿದನು. ಅದನ್ನು ಕೇಳಿದ ವಿಮಲಾದಿತ್ಯ ವಿಷ್ಣುವರ್ಧನನು ಕೋಪದಿಂದ ಉರಿದೆದ್ದನು. ತನ್ನ ಕಾಲಿನಿಂದ ನೆಲವನ್ನು ಕುಟ್ಟುತ್ತಾ "ವಾಸವೀದೇವಿಯ ಮುಡಿಯನ್ನು ಹಿಡಿದು ದರದರನೆ

ಸೆಳೆದೊಯ್ಯುವೆನು. ದಂಗೆ ಎದ್ದಿರುವ ಪೆನುಗೊಂಡೆಯ ಪುರಜನರನ್ನು ಸದೆಬಡಿಯುವೆನು. ಅವರ ಸಕಲಸಂಪತ್ತುಗಳನ್ನು ದೋಚುವೆನು. ನಾನು ಮಹಾಪ್ರತಾಪಶಾಲಿಯು ನನ್ನನ್ನು ಎದುರಿಸುವವರು ಯಾರೂ ಇಲ್ಲ." ಎಂದು ಕೂಗಾಡುತ್ತಾ ದೂತನನ್ನು ತಿರಸ್ಕರಿಸಿ ಅವಮಾನ ಮಾಡಿದನು.

ದೂತಕಾರ್ಯವನ್ನು ನಿರ್ವಹಿಸಿ ವೈಶ್ಯವೃದ್ಧನು, ಮುಂದೆ ಒದಗುವುದನ್ನು ಮನಸ್ಸಿನಲ್ಲಿ ಊಹಿಸಿಕೊಂಡು, ಅಲ್ಲಿಂದ ತಪ್ಪಿಸಿಕೊಂಡು ಪೆನುಗೊಂಡೆಯ ಕಡೆಗೆ ಓಡಿಹೋದನು. ಇತ್ತ ಮದನಾಸ್ತ್ರದಿಂದ ನೊಂದ ವಿಷ್ಣುವರ್ಧನನು ಸಾಕಷ್ಟು ಸೈನ್ಯದೊಡನೆ, ತನ್ನ ರಾಜ್ಯವನ್ನು ಬಿಟ್ಟು ಪಾವನಚರಿತ್ರರಾದ ವೈಶ್ಯರಕುಲವನ್ನು ನಾಶಮಾಡಲು, ಪೆನುಗೊಂಡೆಯಮೇಲೆ ಧಾಳಿ ನಡೆಸಿದನು.

ಆಗ ಪೆನುಗೊಂಡೆ ಪಟ್ಟಣದ ಸಮಸ್ತ ವೈಶ್ಯಜನರು ಗುಂಪುಗೂಡಿ, ನಗರೇಶ್ವರ ಮತ್ತು ಜನಾರ್ದನ ಸ್ವಾಮಿಯವರಿಗೆ ಮಹಾಮಂಗಳಾರತಿಯಾಗಿ ವಾದ್ಯಗಳು ಮೊಳಗುತ್ತಿರಲು ಅರ್ಚಕರು 102 ಜನ ದಂಪತಿಗಳ ಕೈಗೆ ವೀರಕಂಕಣವನ್ನು ಕಟ್ಟಿದರು. ಅವರು ಪಾರ್ವತೀಪರಮೇಶ್ವರರನ್ನು ಸ್ತೋತ್ರಮಾಡುತ್ತಾ ಮೈಮರೆತಿದ್ದರು. ವಾಸವಿಯು ಅಗ್ನಿಕುಂಡಗಳ ರಚನಾ ವಿಧಾನದ ನಕಾಶೆಯನ್ನು ರಾಜಸೇವಕರ ಕೈಗಿತ್ತು ಅದರಂತೆ ಮಧ್ಯಭಾಗದಲ್ಲಿ ಪ್ರಧಾನವಾದ ಕುಂಡವನ್ನು ಅದರ ಬಲಭಾಗದಲ್ಲಿ ಒಂಭತ್ತು ಕುಂಡಗಳನ್ನು, ಎಡಭಾಗದಲ್ಲಿ ಎಂಟು ಕುಂಡಗಳನ್ನು, ಮೇಲ್ಭಾಗದಲ್ಲಿ ಒಂದು ಕುಂಡವನ್ನು, ಕೆಳಭಾಗದಲ್ಲಿ ಒಂದು ಕುಂಡವನ್ನು ಚಕ್ರಾಕಾರವಾದ ಆರು ಮೂಲೆಗಳಲ್ಲಿ ಅರವತ್ತನಾಲ್ಕು ಕುಂಡಗಳನ್ನು ಅಗೆಯುವಂತೆ ಅಪ್ಪಣೆ ಮಾಡಿದಳು. ಜನರೆಲ್ಲ ಅಲ್ಲಿಗೆ ಬರುವ ಮುನ್ನ ಆ ಒಂದು ನೂರ ಮೂರು ಕುಂಡಗಳು ಸಿದ್ಧವಾಗಿದ್ದುವು. ವಾಸವಿಯು ಮಧ್ಯಭಾಗದಲ್ಲಿರುವ ಪ್ರಧಾನವಾದ ಕುಂಡದ ಮುಂದೆ ನಿಂತಳು. ವಿಧಿವತ್ತಾಗಿ 102 ಗೋತ್ರದ ದಂಪತಿಗಳು ಒಂದೊಂದು ಕುಂಡದ ಮುಂದೆ ನಿಂತರು. ಧರ್ಮರಕ್ಷಣೆಗಾಗಿ ಅವರೆಲ್ಲರೂ ನಿಶ್ಚಯಿಸಿ ನಿರ್ಮಲವಾದ ಮನಸ್ಸಿನಿಂದಲೂ, ಉತ್ಸಾಹದಿಂದಲೂ, ತಮ್ಮ ವೈಶ್ಯಕುಲಧರ್ಮಗಳ ಅಗ್ಗಳಿಕೆಯನ್ನು ಪ್ರಶಂಸಿಸುತ್ತಾ, ಧಗಧಗನೆ ಉರಿಯುತ್ತಿರುವ ಅಗ್ನಿಕುಂಡಗಳ ಬಳಿಗೆ ಸಾರಿದರು. ಅದನ್ನು ನೋಡುತ್ತಿದ್ದ ವೈಶ್ಯ

ಜನಸಮುದಾಯವು, "ದುರ್ಮಾರ್ಗನಾದ ಈ ವಿಷ್ಣುವರ್ಧನ ರಾಜನ ಛಲದಿಂದ ಧರ್ಮಾತ್ಮರಾದ ಈ ವೈಶ್ಯವೃದ್ಧರಿಗೆ ಈ ಮಹಾಸಂಕಟವು ಪ್ರಾಪ್ತವಾಯಿತು. ಆ ಪಾಪಿಯಾದ ವಿಷ್ಣುವರ್ಧನ ರಾಜನು ದುರ್ಮರಣಕ್ಕೆ ಸಿಕ್ಕಿ ಸಾಯಲಿ" ಎಂದು ಶಪಿಸುತ್ತಿದ್ದರು.

ಜಗನ್ಮಾತೆಯು ಪರಮಪಾವನಸ್ವರೂಪಳು. ಸಕಲ ನಿಗಮಾಗಮ ಸಂಸ್ತುತ್ಯೆಯೂ, ಕೋಟಿಸೂರ್ಯಪ್ರಕಾಶವನ್ನು ಮೀರಿಸಿರುವ ಕಾಂತಿಯುತಳೂ, ಕರಗಳಲ್ಲಿ ಪಾಶಾಬ್ಜ ಶುಕವೀಣೆಗಳನ್ನು ಹೊತ್ತು ಅಭಯವನ್ನು ಬೀರುತ್ತಾ ಕಂಗೊಳಿಸುವವಳಾಗಿ, ವೈಶ್ಯಕುಲದ ಪಾಪರಾಶಿಯನ್ನು ಪರಿಹರಿಸುವುದಕ್ಕಾಗಿ ಅವತರಿಸಿದ ಪರಮೇಶ್ವರಿಯಂತೆ ವಾಸವಿಯು ಮಂದಹಾಸದಿಂದೊಡಗೂಡಿದ ಮುಖದಿಂದ ಅಲ್ಲಿ ಕಂಡಳು. ನೆರೆದಿದ್ದವರು ಜಯಜಯಕಾರವನ್ನು ಮಾಡುತ್ತಿದ್ದರು. ಪುಣ್ಯಾತ್ಮರಾದ 102 ಗೋತ್ರದ ವೈಶ್ಯರು ಅಪರಿಮಿತವಾದ ಆನಂದ ಶರಧಿಯಲ್ಲಿ ಮುಳುಗಿ ಮೈಮರೆತವರಾಗಿ, ತಮ್ಮ ಜನ್ಮವು ಸಾರ್ಥಕವಾಯಿತೆಂಬ ಭಾವನೆಯಿಂದ, ನಿಷ್ಕಲ್ಮಷವಾದ ತಮ್ಮ ಅಂತಃಕರಣವೆಂಬ ಕುಸುಮವನ್ನು ಸಮರ್ಪಿಸಿ ಪುನಃ ಪುನಃ ಪ್ರಣಾಮಗಳನ್ನು ಮಾಡಿ ತೃಪ್ತರಾಗದೆ, "ಜಗದ್ವಂದ್ಯಳೇ, ಅಮಿತ ಮಹಿಮಳೇ, ದೇವಾದಿದೇವವಂದ್ಯಳೇ ಪರಮಕಾರುಣ್ಯದಿಂದ ಕೂಡಿ ವೈಶ್ಯಕುಲ ಧರ್ಮಗಳನ್ನು ರಕ್ಷಿಸುವ ಜಗನ್ಮಾನ್ಯಳೇ ನಮ್ಮನ್ನು ರಕ್ಷಿಸು ರಕ್ಷಿಸು" ಎನ್ನುತ್ತಾ ಭಕ್ತಿಯಿಂದ ನಮಸ್ಕರಿಸುತ್ತಿದ್ದರು.

ಇವೆಲ್ಲವನ್ನೂ ನೋಡುತ್ತಿದ್ದ ವಿಷ್ಣುವರ್ಧನನ ಸೇನೆಯ ಭಟರು ದಿವ್ಯವಾದ ತೇಜೋರೂಪದಿಂದ ವಾಸವಿಯು ಆವಿರ್ಭವಿಸಿದುದನ್ನು ಕಂಡು, ಮಹದಾನಂದವನ್ನು ಹೊಂದಿದರು. ಅವರ ಕಣ್ಣುಗಳಿಂದ ಆನಂದಭಾಷ್ಪಗಳು ಸುರಿದುವು. ಅವರು ಓಂಕಾರನಾದವನ್ನು ಮಾಡುತ್ತಾ, "ಮಂಗಳಸ್ವರೂಪಳೇ, ಶಿವನ ಮನೋವಲ್ಲಭೆಯೇ ಭಕ್ತಜನಸಂರಕ್ಷಿಣಿಯೇ, ನಿನ್ನ ದರ್ಶನಭಾಗ್ಯದಿಂದ ನಮ್ಮ ಜನ್ಮವು ಇಂದು ಸಫಲವಾಯಿತು" ಎಂದು ಸಂತೋಷದಿಂದ ಬೀಗುತ್ತಾ ದೇವಿಯನ್ನು ನಾನಾವಿಧವಾಗಿ ಸ್ತೋತ್ರಮಾಡುತ್ತಾ ಉತ್ಸಾಹದಿಂದ ಮೈದುಂಬಿದವರಾಗಿ ನಮಸ್ಕರಿಸಿದರು. ಆ ನಗರದ ಬಾಲಕರೂ ಕನ್ಯೆಯರೂ

ವಾಸವೀದೇವಿಯ ದಿವ್ಯತೇಜೋಮಯವಾದ ರೂಪವನ್ನು ನೋಡಿ ಆನಂದದಿಂದ ಉನ್ಮತ್ತರಾಗಿ ನಾನಾವಿಧವಾಗಿ ಹಾಡುತ್ತಾ ಗುಂಪುಗುಂಪಾಗಿ ಕೂಡಿಕೊಂಡು ನರ್ತನಮಾಡುತ್ತಾ, ಜಗನ್ಮಾತೆಯಾದ ಪಾರ್ವತಿದೇವಿಯ ಮಹಿಮೆಗಳನ್ನು ಧ್ಯಾನಮಾಡುತ್ತಾ, ಸಂತೋಷದಿಂದ ತಾವು ಧನ್ಯರಾದೆವೆಂದು, ಪ್ರಸನ್ನಚಿತ್ತರಾಗಿ ನಮಸ್ಕರಿಸುತ್ತಾ, ವೈಶ್ಯಕುಲವು ಪಾವನವಾಯಿತು ಎನ್ನುತ್ತಿದ್ದರು.

ಹೀಗೆ 102 ಗೋತ್ರದ ವೈಶ್ಯಕುಲದವರು ಆಬಾಲವೃದ್ಧರಾಗಿ ಸಕಲರೂ ನಿರಂತರವೂ ದೇವಿಯನ್ನು ಭಕ್ತಿಭರಿತರಾಗಿ ಉತ್ಸಾಹದಿಂದ ಸ್ತೋತ್ರಮಾಡಿ ವಿನಯದಿಂದ ನಿವೇದಿಸಿಕೊಂಡರು. "ಎಲೈ ದೇವಿಯೇ, ಶೋಕಸಾಗರದಲ್ಲಿ ಮುಳುಗಿ ದಿಕ್ಕುಗಾಣದಿದ್ದ ನಮ್ಮನ್ನು ಪರಮಸಂತೋಷಸಾಗರದಲ್ಲಿ ಮುಳುಗಿಸಿದೆ. ಸನ್ಮಾರ್ಗದಿಂದ ಪರಮಪದ ಪ್ರಾಪ್ತಿಯಾಗುವಂತೆ, ನಮ್ಮ ಕುಲಕೋಟಿಗಳು ಧನ್ಯವಾದವು. ಎಲೈ ದಯಾಸಾಗರಳೇ, ನಮ್ಮನ್ನು ಉದ್ಧರಿಸಿ ಅನುಗ್ರಹಮಾಡು. ನಮ್ಮ ಅಜ್ಞಾನವನ್ನೂ ಮನಸ್ಸಿನ ಸಂಕಟವನ್ನೂ ಕಳೆದು ಜ್ಞಾನಜ್ಯೋತಿಯನ್ನು ನಮ್ಮ ಹೃದಯಗಳಲ್ಲಿ ಬೆಳಗಿಸು. ನಮ್ಮೆಲ್ಲರನ್ನೂ ಕೃಪಾಕಟಾಕ್ಷದಿಂದ ನೋಡು" ಎಂದು ಪ್ರಾರ್ಥಿಸಿದರು. ಆಗ ವಾಸವೀದೇವಿಯು ಅವರ ಮನಸ್ಸಿನ ಮೋಹಭ್ರಾಂತಿಗಳು ನಾಶವಾಗುವಂತೆಯೂ, ಮತ್ತು ವೇದವಿಹಿತವಾದ ಧರ್ಮವು ಪರಿಸ್ಫುಟವಾಗುವಂತೆಯೂ, ತನ್ನ ತೋಜೋಮಯವಾದ ವಾಣಿಯಿಂದ ಉಪದೇಶಿಸಿದಳು.

ಪರಶಿವನು ಅಪಾರ ಕರುಣಾಸಾಗರನು. ಮಂಗಳಸ್ವರೂಪನು. ಶುಭಪ್ರದನು. ಯಾವಾಗಲೂ ಆತನನ್ನು ತ್ರಿಕರಣಶುದ್ಧಿಯಿಂದ ಧ್ಯಾನಿಸುತ್ತಾ, ಆತನ ಅನಂತ ಸ್ವರೂಪಗಳನ್ನು ಮನಸ್ಸಿನಲ್ಲಿ ಭಾವಿಸುತ್ತಾ, ಆರಾಧನೆಯನ್ನು ಮಾಡಿ, ಸರ್ವಾರ್ಪಣ ಬುದ್ಧಿಯಿಂದ ಭಜಿಸಿದರೆ, ನಿಮಗೆಲ್ಲಾ, ಮುಕ್ತಿಯು ಸುಲಭವಾಗುವುದು. ನಿಮಗೆ ಪ್ರಾಪಂಚಿಕವಾದ ಸಕಲಭೋಗಭಾಗ್ಯಗಳೂ ಲಭಿಸುವುವು. ಇದರಲ್ಲಿ ಯಾವ ಸಂದೇಹವೂ ಇಲ್ಲ. ಗುರುಹಿರಿಯರನ್ನು ಸೇವಿಸುವುದರಿಂದ ಸಕಲಪಾಪಗಳೂ ನಶಿಸುವುವು. ಸಂಸಾರಕೋಟಲೆಗೆ ಗುರಿಮಾಡುವ ಎಲ್ಲಾ ಇಂದ್ರಿಯವ್ಯಾಪಾರಗಳನ್ನೂ ಬಿಟ್ಟು, ದೀನದಲಿತರಲ್ಲಿ ಅನುಕಂಪೆಯನ್ನು ತೋರಿಸುತ್ತಾ, ದಾನಧರ್ಮಗಳನ್ನು ಆಚರಿಸುತ್ತಾ, ಪರಮೇಶ್ವರನಿಗೆ ಶರಣಾಗಿರಿ. ಇದರಿಂದ

ನಿಮಗೆ ಸಂಸಾರಬಂಧನದಿಂದ ಮುಕ್ತಿಯು ದೊರೆಯುವುದು. ನೀವು ಮಿತಭಾಷಿಗಳಾಗಿಯೂ, ಶಾಂತರಾಗಿಯೂ ವರ್ತಿಸಿರಿ. ಲೋಕದಲ್ಲಿ ಸತ್ಪಾತ್ರರನ್ನು ಆದರಿಸಿರಿ. ಉಚಿತವರಿತು ದಾನಧರ್ಮಗಳನ್ನು ಮಾಡುತ್ತಾ, ತ್ಯಾಗಬುದ್ಧಿಯನ್ನು ವೃದ್ಧಿಪಡಿಸಿಕೊಳ್ಳಿ. ವಟುಗಳಾದವರು ಗುರುಸೇವೆಯನ್ನು ಮಾಡಿಕೊಂಡಿರಲಿ. ಹಿರಿಯರು ಪಾವನವಾದ ವಾನಪ್ರಸ್ಥ ಧರ್ಮವನ್ನು ಪಾಲಿಸಲಿ. ದೃಢತರವಾದ ವೈರಾಗ್ಯವನ್ನು ಬೆಳೆಸಿಕೊಂಡು, ಚಿತ್ತಶುದ್ಧಿಯನ್ನು ಸಾಧಿಸಿರಿ. ಸತ್ಯ ಮತ್ತು ಧರ್ಮನಿಷ್ಠರಾಗಿ ನಿಮ್ಮ ಮನಸ್ಸಿನ ಜಾಡ್ಯತೆಗಳನ್ನೂ, ಲೋಭ, ಕಾಮಾದಿಗಳನ್ನೂ ಕಳೆಯಿರಿ. ದೇಹೇಂದ್ರಿಯಾದಿಗಳ ವಿಷಯಾಸಕ್ತಿಗಳನ್ನು ದಮನಮಾಡಿ. ನಿಮ್ಮ ಮನಸ್ಸಂಯಮವನ್ನು ವೃದ್ಧಿಪಡಿಸಿಕೊಳ್ಳಿ. ಅಷ್ಟವಿಧವಾದ ಮದಗಳನ್ನೂ, ಮನಸ್ಸಿನ ಚಾಂಚಲ್ಯವನ್ನೂ ನೀಗಿಕೊಂಡು ಬ್ರಾಹ್ಮೀಭಾವದಲ್ಲಿ ಕೂಡುವ ತತ್ತ್ವವನ್ನು ಹೃದಯದಲ್ಲಿ ಸ್ಥಿರಗೊಳಿಸಿ. ನೀವುಗಳು ಜೀವಿತವನ್ನು ಈರೀತಿ ಸಾಧಿಸಿದರೆ, ಅದರ ಪ್ರಭಾವದಿಂದಲೇ ನಿಮಗೆ ಸರ್ವರಲ್ಲಿಯೂ ಮಾನ್ಯತೆಯು ದೊರೆಯುವುದು. ಪರಶಿವೆಯೂ ಅನುಗ್ರಹಿಸುವಳು.

ಅನಂತರ ನಗರದ ವೈಶ್ಯಬಾಲಕರನ್ನು ಉದ್ದೇಶಿಸಿ, "ನೀವೆಲ್ಲರೂ ಧೈರ್ಯಗೆಡದೆ, ನಿತ್ಯಾನಿತ್ಯವಿವೇಕದಿಂದ ಕೂಡಿ, ಜಗತ್ತಿನಲ್ಲಿ ಯೋಗ್ಯರೆನಿಸಿಕೊಂಡು, ನಿಮ್ಮ ವಂಶದ ಪರಿಶುದ್ಧವಾದ ಕೀರ್ತಿಯು ವಿಸ್ತರಿಸುವಂತೆ ಮಾಡಿರಿ. ಈಗ ತಿಳಿಸಿದ ಧರ್ಮವನ್ನು ನೀವು ಮನಗಂಡು, ಅದನ್ನು ನಿಮ್ಮ ಸಚ್ಚಾರಿತ್ರ್ಯದಿಂದ ವೃದ್ಧಿಪಡಿಸಿಕೊಂಡರೆ ನಿಮ್ಮ ಕುಲಗಳ ಅಭಿವೃದ್ಧಿಯೂ, ಜೀವನದ ಮಧುರತೆಯೂ ವೃದ್ಧಿಯಾಗುವುವು. ನಿಮಗೆ ಅದರಿಂದ ಸಂಪತ್ತು ಶ್ರೇಯಸ್ಸುಗಳು ಸಿದ್ಧಿಸುವುವು.

ತನ್ನ ಅವಿಚ್ಛಿನ್ನಭಕ್ತರಾದ ನೂರೆರಡು ಗೋತ್ರಗಳ ವೈಶ್ಯಮಹಾಜನರನ್ನು ಸಂಬೋಧಿಸಿ ವಾಸವೀದೇವಿಯು ಹೇಳಿದಳು. "ಪರಶಿವನ ಕೃಪಾಮಹಿಮೆ, ಅನುಗ್ರಹದಿಂದ ನಿಮ್ಮ ಗೋತ್ರಗಳು ಲೋಕದಲ್ಲಿ ಆಚಂದ್ರಾರ್ಕಪರ್ಯಂತ ಚಿರಸ್ಥಾಯಿಯಾಗಿರಲಿ. ಅವು ಕಾಲಕಾಲಕ್ಕೆ ಸಂವರ್ಧಿಸಿ ಬೆಳಗಲಿ." ಆರನೂರ ಹನ್ನೆರಡು ಗೋತ್ರದ ವೈಶ್ಯಕುಲದವರು ಪ್ರತ್ಯೇಕವಾಗಿಯೇ ಉಳಿದು ಹರಿಹರರಲ್ಲಿ

ಅಭೇದ ಭಾವವನ್ನು ಹೊಂದಿ, ಲಿಂಗಧಾರಣೆಯನ್ನು ಮಾಡಿಸಿಕೊಂಡು, ಭಗವದಾರಾಧನೆಯನ್ನು ಮಾಡುತ್ತಾ ಭಗವಂತನ ಮಹಿಮೆಗಳನ್ನು ಕೀರ್ತಿಸುತ್ತಾ ಯೋಗ್ಯವಾಗಿ ಸನ್ಮಾರ್ಗದಲ್ಲಿ ನಡೆಯಿರೆಂದು ಉಪದೇಶಿಸಿದಳು.

ವೈಶ್ಯಕುಲದ ವೃದ್ಧದಂಪತಿಗಳೂ, ಬಾಲಕರೂ, ಭಕ್ತಸಂದಣಿಯೂ, ಕನ್ಯೆಯರೂ ಮತ್ತು ಮನಃಪರಿವರ್ತನೆಯನ್ನು ಹೊಂದಿದ್ದ ವಿಷ್ಣುವರ್ಧನ ಮಹಾರಾಜನ ಸೇನೆಗಳವರೂ, ಹಾಗೂ ನೆರೆದ ಇತರ ಜನಸಂದಣಿಯೂ ಭಗವಂತನ ದಿವ್ಯನಾಮಗಳನ್ನು ಭಜಿಸುತ್ತಾ ಮೈಮರೆತಿದ್ದರು. ವಾಸವೀದೇವಿಯು ತನ್ನ ಭಕ್ತವೃಂದಕ್ಕೆ ಸಕಲಧರ್ಮಗಳನ್ನು ವಿಸ್ತರಿಸಿ, ತಾನು ಮುಂದೆ ಅಗ್ನಿಪ್ರವೇಶವನ್ನು ಮಾಡಲು ಸನ್ನದ್ಧಳಾದಳು.

ಭಕ್ತವೃಂದದವರು ಘೋಷಿಸುತ್ತಿದ್ದ ಪ್ರಣವದಿಂದಲೂ ಭಗವನ್ನಾಮ ದಿಂದಲೂ ಆ ಪ್ರದೇಶವು ಇದು ವೈಕುಂಠವೋ ಅಥವಾ ಪರಮಪಾವನವಾದ ಕೈಲಾಸವೋ ಎಂಬುವ ಭ್ರಾಂತಿಯನ್ನು ಉಂಟುಮಾಡುತ್ತಿತ್ತು. ಜನರೆಲ್ಲರೂ ಕೂಡಿಕೊಂಡು ಪರಶಿವನ ನಾಮಸಂಕೀರ್ತನೆಯನ್ನು ಏಕನಿಷ್ಠೆಯಿದ ಹಾಡುತ್ತಾ, ತಾಳಗಳನ್ನು ಕುಟ್ಟುತ್ತಾ ಆನಂದಸಾಗರದಲ್ಲಿ ಮುಳುಗಿ, ಲೋಕವನ್ನು ಮರೆತು ಮುಂದುವರಿದು ಅಗ್ನಿ ಪ್ರವೇಶ ಮಾಡಿದರು. ಅಗ್ನಿದೇವನೂ ಸಹ ಕೃಪಾಭರಿತನಾಗಿ ಇಷ್ಟು ಜನರನ್ನು ತಾನು ಒಪ್ಪಿಸಿಕೊಳ್ಳಲು ತನಗೂ ಸಾಧ್ಯವಿಲ್ಲವೆಂದು ಪ್ರೀತಿಯಿಂದ ನಿವೇದಿಸಿಕೊಳ್ಳಲು, ಆಗ ಮಹಾಮಹಿಮಳೂ ಸಾಕ್ಷಾತ್ ಜಗನ್ಮಾತೆಯೂ, ಪಾರ್ವತಿಯೂ, ವೈಶ್ಯಕುಲ ಸಂಜಾತೆಯೂ ಆದ ಕನ್ಯಕಾಪರಮೇಶ್ವರಿಯು ಯಜ್ಞೇಶ್ವರನನ್ನು ನಾನಾವಿಧವಾಗಿ ಸ್ತೋತ್ರಮಾಡಲು, ಆಗ ಅಗ್ನಿಯು ಭುಗಿಲ್ ಭುಗಿಲ್ ಎಂದು ಪ್ರಜ್ವಲಿಸುತ್ತಾ ಸಕಲರನ್ನೂ ತಾನು ಆವರಿಸಿ ಅವರನ್ನು ಕ್ಷಿಪ್ರದಲ್ಲಿಯೇ ಕೈಲಾಸಕ್ಕೆ ಕೊಂಡೊಯ್ದನು.

ಈ ವಿಧದಲ್ಲಿ ವಾಸವೀದೇವಿಯು ತನ್ನ ಕುಲದ ಅಗ್ಗಳಿಕೆಯನ್ನು ಬಯಸುತ್ತಾ, ತನ್ನ ಹೃತ್ಕಮಲದಲ್ಲಿ ಪರಶಿವನನ್ನು ಧ್ಯಾನಿಸುತ್ತಾ, ಆ ಅಚಿಂತ್ಯಮಹಿಮಳಾದ ಕನ್ಯಕಾಪರಮೇಶ್ವರಿಯು, ಈ ನೀಚನಾದ ವಿಷ್ಣುವರ್ಧನನ ಕಲುಷಿತವಾದ ದೃಷ್ಟಿಗೆ ಪಕ್ಕಾದ ತನ್ನ ನಾಮರೂಪಗಳನ್ನು ಅಗ್ನಿಗೆ ಅರ್ಪಿಸಿದಳು. ಕನ್ಯಕಾಪರಮೇಶ್ವರಿಯು

ಅಗ್ನಿಗೆ ತನ್ನ ಶರೀರವನ್ನರ್ಪಿಸಿದ ಕ್ಷಣದಲ್ಲಿಯೇ ನಭೋಮಂಡಲದಲ್ಲಿ ಒಂದು ದಿವ್ಯವಾದ ಪ್ರಕಾಶವು ಪ್ರಜ್ವಲಿಸಿ ದಶದಿಕ್ಕುಗಳಿಗೂ ಹರಡಿತು.

ಇವುಗಳನ್ನೆಲ್ಲಾ ನೋಡುತ್ತಿದ್ದ ಜನಗಳ ಸಂದಣಿಯು ಹಾಹಾಕಾರದಿಂದ ರೋಧಿಸಿತು. ಕಣ್ಣೀರಿಡುತ್ತಾ ನೊಂದು ಬಸವಳಿದುವು. ಕೆಲವರು ವೈಶ್ಯಕುಲದವರ ಧೈರ್ಯೋತ್ಸಾಹಗಳನ್ನು ತೋರಿದ ರೀತಿಯಲ್ಲಿಯೇ, ನಾನಾವಿಧವಾಗಿ ಪ್ರಶಂಸಿಸಿದರು. ದೇವತೆಗಳು "ಭಾಪು" "ಭಾಪು" ಎಂದು ಮೆಚ್ಚಿ ಹೂಮಳೆಗರೆದರು. ಕುಸುಮ ಶ್ರೇಷ್ಠಿಯ ಕುಮಾರಿಯಾದ ವಾಸವೀದೇವಿಯ ಭಕ್ತರೂ, ಅಲ್ಲಿದ್ದ ರಾಜನ ಸೈನಿಕರೂ ಭಗವನ್ನಾಮ ಸಂಕೀರ್ತನೆಯನ್ನು ಮಾಡುತ್ತಾ ಭಾವಪರವಶರಾಗಿ ನರ್ತನಮಾಡುತ್ತಾ, ಕನ್ಯಕಾಪರಮೇಶ್ವರಿಯ ಮಹಿಮಾತಿಶಯ ಗಳನ್ನು ಸ್ತೋತ್ರಮಾಡುತ್ತಿದ್ದರು.

ಇಷ್ಟುಕಾಲವೂ ಉದ್ವೃತ್ತರಾಗಿದ್ದ ರಾಜನ ಸೈನ್ಯದವರೂ ದೇವಿಯ ಮಹಿಮೆ ಗಳನ್ನು ಪಾಡುತ್ತಾ ವೈಶ್ಯಕುಲದವರು ಆಚರಿಸಿದ ಕನ್ಯಕಾಪರಮೇಶ್ವರಿಯ ಉತ್ಸವ ಸಮಾರಂಭಗಳಲ್ಲಿ ಭಾಗವಹಿಸಿದರು. ಈಗಲೂ ಸಹ ಕನ್ಯಕಾಂಬಾ ದೇವಾಲಯದಲ್ಲಿ ರಾಜನ ಸೈನ್ಯದವರ ಸಂತತಿಯವರು "ವೀರಮುಷ್ಟಕ"ರೆಂಬ ಅಭಿಧಾನದಿಂದ ಸೇವೆಯನ್ನು ಸಲ್ಲಿಸುತ್ತಿರುವರು. ಅವರ ಉತ್ತಮವಾದ ಚಾರಿತ್ರ್ಯ, ಭಕ್ತಿಗಳಿಗೆ ಮೆಚ್ಚಿದ ವೈಶ್ಯಕುಲದವರು ಅವರನ್ನು ನಾನಾವಿಧವಾಗಿ ಗೌರವಿಸಿ ಪೋಷಿಸುತ್ತಿರುವರು.

ಜಗಜ್ಜನನಿಯಾದ ಪಾರ್ವತೀದೇವಿಯೇ ಜಯಜಯ; ಸಕಲಸದ್ಗುಣ ಭರಿತಳೇ ಜಯಜಯ; ಆರ್ಯವೈಶ್ಯ ಕುಲಸಂವರ್ಧಿನೀ ದೇವಿಯೇ ಜಯಜಯ; ಆನಂದದಾಯಕಿಯೇ ಜಯಜಯ; ಪರಮಮಹಿಮೋಪೇತೆಯೇ ಜಯಜಯ; ಪಾಪಾರಣ್ಯದಾವಾನಲೆಯೇ ಜಯಜಯ; ಕೃಪಾಪೂರ್ಣಳಾದ ಮಾತೆಯೇ ಜಯಜಯ; ಭಕ್ತಜನಸೇವಿತಳೇ ಜಯಜಯ; ಮಹಾಮಾಯೆಯೇ; ಶಿವನ ಅರ್ಧಾಂಗಿಯೇ; ವರದೆಯೇ; ಪರಮೇಶ್ವರಿಯೇ; ರಾಜರಾಜೇಶ್ವರಿಯೇ ಜಯ ಜಯ ನಮ್ಮನ್ನು ಕೃಪಾಪೂರ್ಣದೃಷ್ಟಿಯಿಂದ ರಕ್ಷಿಸು ಎಂದು ಸ್ತುತಿಸಿದರು.

ಇತ್ತ ಕಡೆ ವಿಷ್ಣುವರ್ಧನ ಮಹಾರಾಜನು ಸೈನ್ಯಪರಿವಾರಗಳೊಡನೆ ಕೂಡಿಕೊಂಡು ಪೆನುಗೊಂಡೆಯಮೇಲೆ ಧಾಳಿಯನ್ನು ಮಾಡಲು ಮುನ್ನುಗ್ಗುತ್ತಿದ್ದ ಸಮಯದಲ್ಲಿ ಅಂತರಿಕ್ಷವನ್ನು ವ್ಯಾಪಿಸಿ ಪ್ರಜ್ವಲಿಸುವ ಮಹಾಪ್ರಕಾಶವನ್ನು ನೋಡಿ ಅಚ್ಚರಿಗೊಂಡು, ಇದು ತನಗೆ ಈ ಸಮಯದಲ್ಲಿ ನಿಶ್ಚಯವಾಗಿರುವ ವಿವಾಹಮಂಗಳಕ್ಕೆ ಶುಭಶಕುನವೆಂದು ಮನಸ್ಸಿನಲ್ಲಿಯೇ ಆನಂದಿಸುತ್ತಾ ಬೇಗ ಬೇಗನೆ ಮುಂದುವರಿಯುತ್ತಿದ್ದನು.

ವಿಧಿವಿಲಾಸವು ವಿಚಿತ್ರವಾಗಿದ್ದಿತು. ಮದುವೆಯಾಗಲು ಬಯಸಿ ಬಂದವನು ಮರಣವನ್ನು ಹೊಂದುವ ವಿಪರೀತಘಟನೆಯು ಕಾದಿದ್ದಿತು. ಅವನು ಕಂಡ ಜಾಜ್ವಲ್ಯಮಾನವಾದ ಪ್ರಕಾಶವು, ಮುಂದೆ ಅವನಿಗೆ ಒದಗುವ, ಶಾಪವಿಮೋಚನೆಯ ಶುಭಸಂಕೇತದಂತೆ ಇದ್ದಿತು. ಉತ್ಸಾಹದಿಂದ ವಿಷ್ಣುವರ್ಧನನು ಪೆನುಗೊಂಡೆಯನ್ನು ಸಮೀಪಿಸಿ ಅಲ್ಲಿನ ಜನರ ಮನೋವ್ಯಾಕುಲತೆಯನ್ನು ತಿಳಿದು, ನಡೆದ ಸಂಗತಿಯೇನೆಂದು ವಿಚಾರಿಸಲು ಅವರು, "ಅಕಳಂಕಚರಿತಳಾದ ವಾಸವೀದೇವಿಯು ಅಗ್ನಿಗೆ ಪ್ರಾಣಾರ್ಪಣವನ್ನು ಮಾಡಿದಳು" ಎಂದರು.

ಈ ಸಮಾಚಾರವು ರಾಜನ ಕಿವಿಗೆ ಬೀಳುತ್ತಿದ್ದಂತೆಯೇ ಅವನ ತಲೆಯು ವಜ್ರಾಘಾತದಿಂದ ಸಿಡಿದು ಬೀಳ್ವ ಗಿರಿಶಿಖರದೋಪಾದಿಯಲ್ಲಿ ಸಹಸ್ರ ಹೋಳುಗಳಾಗಿ ಅಂತರಿಕ್ಷಕ್ಕೆ ಸಿಡಿಯಿತು. ಅದನ್ನು ಕಂಡು ಸಕಲರೂ ವಿಸ್ಮಯದಿಂದ ಸ್ತಂಭೀಭೂತರಾದರು. ರಾಜನ ಸೈನ್ಯದವರು ವೈಶ್ಯರನ್ನು ಸದೆಬಡಿಯಲು ಆವೇಶದಿಂದ ಅಬ್ಬರಿಸುತ್ತಾ ಮುಂದೆ ನುಗ್ಗಿದರು. ವೈಶ್ಯಬಾಲಕರು ರಣನಿಪುಣರಂತೆ ಅವರೊಡನೆ ಕಾದಲು ಸನ್ನದ್ಧರಾದರು. ವೈಶ್ಯಬಾಲಕರಿಗೂ ವಿಷ್ಣುವರ್ಧನನೊಡನೆ ಬಂದಿದ್ದ ಸೈನ್ಯಗಳಿಗೂ ಘೋರ ಕದನವೇ ನಡೆದುಹೋಯಿತು. ವೈಶ್ಯವೀರರು ತಮಗೊದಗಿದ ಆಯುಧಗಳಿಂದಲೇ ಪರಾಕ್ರಮದಲ್ಲಿ ಸರಿಮಿಗಿಲೆನಿಸುವಂತೆ ನೃಪಸೈನ್ಯದೊಡನೆ ಹೋರಾಡಿದರು. ಅವರ ಹೊಡೆತಕ್ಕೆ ರಾಜನಸೈನ್ಯ ಹೆದರಿತು. ಅವರು ಘಾಸಿಗೊಂಡು ತಮ್ಮ ಪರಾಕ್ರಮವು ಅಡಗಿ ಹಿಂದೆ ಸರಿದರು. ಅದನ್ನು ಗಮನಿಸಿದ ಯುವರಾಜನಾದ ರಾಜರಾಜೇಂದ್ರನು,

ವೈಶ್ಯವೀರರೊಡನೆ ಸಂಧಿಯನ್ನು ಸಾಧಿಸಿ ಕುಸುಮ ಶ್ರೇಷ್ಠಿಯ ಮಗನಾದ ವಿರೂಪಾಕ್ಷನಿಗೆ ನಮಿಸಿ, ಶರಣಾಗಿ, ತನ್ನ ಜೀವಭಿಕ್ಷೆಯನ್ನೂ ಅವನ ಸ್ನೇಹವನ್ನೂ ಯಾಚಿಸಿದನು.

ರಾಜರಾಜೇಂದ್ರನ ವಿನಯಾದಿಸದ್ಗುಣಗಳಿಗೆ ಮನಸೋತು ವಿರೂಪಾಕ್ಷನು ಲೋಕವು ಮೆಚ್ಚುವಂತೆ ಅವನಿಗೆ ಹೇಳಿದನು. “ಎಲೈ ರಾಜಕುಮಾರನೆ, ನಾವು ಧರ್ಮವನ್ನು ಪಾಲಿಸಿಕೊಂಡು ಬಂದರೆ ಆ ಧರ್ಮವೂ ನಮ್ಮನ್ನು ರಕ್ಷಿಸುವುದು. ನಮ್ಮ ಧರ್ಮವನ್ನು ರಕ್ಷಿಸುವ ಭರದಲ್ಲಿ ನಮಗೆ ಈ ಕದನ ದೀಕ್ಷೆಯು ಪ್ರಾಪ್ತವಾಯಿತು. ನಮ್ಮ ಸ್ತ್ರೀಯರ ಮಾನವನ್ನೂ ನಮ್ಮ ವೈಶ್ಯಸಮಾಜವನ್ನೂ ನಾವು ರಕ್ಷಿಸಿದೆವು. ಇನ್ನು ಮೇಲೆ ನೀನು ರಾಜ್ಯವನ್ನು ಧರ್ಮದಿಂದ ಪಾಲಿಸಬೇಕು”. ವಿರೂಪಾಕ್ಷನ ಔದಾರ್ಯವನ್ನೂ ಮೆಚ್ಚಿದ ರಾಜರಾಜೇಂದ್ರನಿಗೆ ಮನಸ್ಸು ನೆಮ್ಮದಿಯಾಯಿತು. ಅವನು ಅತಿ ಪ್ರೇಮದಿಂದಲೂ, ಗೌರವಗಳೊಡನೆಯೂ ವಿರೂಪಾಕ್ಷನಿಗೆ ಸಾಮಂತ ಪದವಿಯನ್ನು ದಯೆಗೈದನು. ಪಟ್ಟಣಕ್ಕೆ ತೆರಳಿ ತಾನೇ ವಿರೂಪಾಕ್ಷನಿಗೆ ಪಟ್ಟಾಭಿಷೇಕವನ್ನೂ ಮಾಡಿ, ಅನಂತರ, ತನ್ನ ನಿಜನಗರಿಗೆ ಹಿಂದಿರುಗುವೆನು ಎನ್ನಲು, ವಿರೂಪಾಕ್ಷನು ಅದಕ್ಕೆ ಸಮ್ಮತಿಸದೆ, “ಮೊದಲು ರಣದಲ್ಲಿ ಹತರಾದ ಜನರಿಗೆ ಉಚಿತರೀತಿಯಲ್ಲಿ ಅಂತ್ಯಕರ್ಮಗಳು ನಡೆಯಬೇಕು” ಎಂದು ತನ್ನ ಮನಸ್ಸಿನ ವ್ಯಾಕುಲವನ್ನು ಸೂಚಿಸಿದನು.

ರಾಜರಾಜೇಂದ್ರನು ವಿರೂಪಾಕ್ಷನ ಸೂಚನೆಯನ್ನು ಮನ್ನಿಸಿದನು. 102 ಗೋತ್ರಗಳ ವೈಶ್ಯಜನರು ತಮ್ಮವರಿಗೆ ಪಿಂಡೋದಕಗಳನ್ನು ಕೊಡಲು, ಪುಣ್ಯ ಕ್ಷೇತ್ರವಾದ ಕಾಶಿಗೆ ತೆರಳಿದರು. ಅಲ್ಲಿ ಪವಿತ್ರವಾದ ಗಂಗಾನದಿಯಲ್ಲಿ ಮಿಂದು, ಬಹಳ ಶ್ರದ್ಧೆಯಿಂದ, ಗತಿಸಿದ ತಮ್ಮವರಿಗೆ ಅಂತ್ಯಕ್ರಿಯೆಗಳನ್ನು ನೆರವೇರಿಸಿದರು. ಅನಂತರ ವಿಶ್ವೇಶ್ವರನ ಮತ್ತು ಅನ್ನಪೂರ್ಣೆಯ ದರ್ಶನವನ್ನು ಪಡೆದು, ಪರಮೇಶ್ವರನನ್ನು ನಾನಾ ಬಗೆಯಲ್ಲಿ ಸ್ತೋತ್ರಮಾಡಿದರು.

ಆ ಸಮಯದಲ್ಲಿ ಪಾರ್ವತಿದೇವಿಯು ಪರಮತೇಜಸ್ಸಿನಿಂದಲೂ ಪ್ರಸನ್ನ ವದನದಿಂದಲೂ ಕೂಡಿ ವೈಶ್ಯರಿಗೆ ದರ್ಶನವನ್ನಿತ್ತು “ಎಲೈ, ವೈಶ್ಯಕುಲತಿಲಕರಿರಾ,

ನೀವು ನಿಮ್ಮ ಧರ್ಮನಿಷ್ಠೆಯಿಂದ ವೈರಭಾವವನ್ನು ಗೆದ್ದಿರುವಿರಿ. ನೀವು ಈ ಕ್ಷೇತ್ರದಲ್ಲಿತ್ತ ಪಿಂಡೋದಕಾದಿಗಳಿಂದ ನಿಮ್ಮ ಪಿತೃವರ್ಗವು ತೃಪ್ತವಾಗಿರುವುದು. ನಾನೂ ಸಹ ಸಂತುಷ್ಟಳಾಗಿರುವೆನು. ನಿಮಗೆ ಜೀವನಯಾತ್ರೆಯಲ್ಲಿ ಎಷ್ಟೇ ವಿಧವಾಗಿ ಸಂಕಷ್ಟಗಳು ಒದಗಿದರೂ, ನೀವು ನಿಶ್ಚಲಮನಸ್ಸಿನಿಂದ ನನ್ನನ್ನು ಧ್ಯಾನಿಸಿದರೆ ಕೂಡಲೇ ನಾನು ನಿಮ್ಮ ದುರಿತರಾಶಿಯನ್ನೆಲ್ಲಾ ನಿವಾರಿಸುವೆನು. ನಿಮಗೆ ಸೌಖ್ಯಸಂಪದಗಳನ್ನೂ ಕೀರ್ತಿಯನ್ನೂ ಅನುಗ್ರಹಿಸುವೆನು. ನನ್ನ ಧ್ಯಾನದಿಂದ ನಿಮಗೆ ಮೋಕ್ಷಪದವಿಯೂ ಲಭಿಸುವುದು. ನೀವುಗಳು ನಿಮ್ಮ ನಿಮ್ಮ ಮನೆಗಳಲ್ಲಿ ಸದ್ವಿಚಾರಗಳನ್ನು ಮಾಡುತ್ತಾ, ದೈವಭಕ್ತಿಯಿಂದ ಕೂಡಿಬಾಳಿರಿ" ಎಂದು ಹೇಳಿ ಪಾರ್ವತಿಯು ಅಂತರ್ಧಾನಳಾದಳು. ವೈಶ್ಯರೆಲ್ಲರೂ ಭಕ್ತಿಯಿಂದ ದೇವಿಯನ್ನು ಕೊಂಡಾಡುತ್ತಾ ನಿರ್ಮಲವಾದ ಅಂತಃಕರಣದಿಂದ ವಿರೂಪಾಕ್ಷನ ಜೊತೆಗೂಡಿ, ಪೆನುಗೊಂಡೆಗೆ ಹಿಂದಿರುಗಿದರು.

ವಿರೂಪಾಕ್ಷನು ರಾಜರಾಜೇಂದ್ರನು ಆಗಮಿಸಲು ಅವನನ್ನು ಸ್ವಾಗತಿಸಲು ಮಂತ್ರಿಗಳನ್ನೂ, ಹಿರಿಯರನ್ನೂ ಕಳುಹಿಸಿ ಅವನನ್ನು ಬರಮಾಡಿಕೊಂಡನು. ಶುಭ ಮುಹೂರ್ತದಲ್ಲಿ ವಿರೂಪಾಕ್ಷನಿಗೆ ಪಟ್ಟಾಭಿಷೇಕ ಮಹೋತ್ಸವವು ನೆರವೇರಿತು. ಉತ್ಸವದಲ್ಲಿ ರಾಜರುಗಳೂ, ಸಾಮಂತರೂ, ಹಿರಿಯರೂ, ಪುರಜನರೂ, ಆಹ್ವಾನಿತರಾಗಿ ಬಂದು ನೆರೆದರು. ಪಟ್ಟಣವೆಲ್ಲವೂ ನಾನಾವಿಧವಾಗಿ ಅಲಂಕೃತವಾಯಿತು.

ಜನರೆಲ್ಲರೂ ಅಮಿತಾನಂದದಿಂದ ಶೋಭಿಸುತ್ತಿದ್ದರು. ವೇದವಿದರಾದ ಬ್ರಾಹ್ಮಣರು ವೇದಘೋಷವನ್ನು ಮಾಡುತ್ತಿದ್ದರು. ಪುರೋಹಿತರು ಪುಣ್ಯಾಹ ಕರ್ಮವನ್ನು ವಿರಚಿಸಿ, ಮುಹೂರ್ತವನ್ನು ಕಾಯುತ್ತಿದ್ದರು. ಆ ಸಮಯದಲ್ಲಿ ಸಂತೋಷದಿಂದ ರಾಜರಾಜೇಂದ್ರನು ಅಲ್ಲಿಗೆ ಆಗಮಿಸಿ ವಿರೂಪಾಕ್ಷನ ತಲೆಯ ಮೇಲೆ ಸಾಮಂತಪದವಿಯ ಕಿರೀಟವನ್ನಿರಿಸಿದನು. ಅಲ್ಲಿಗೆ ಆಗಮಿಸಿ ನೆರೆದವರೆಲ್ಲರೂ ಹರ್ಷೋದ್ಗಾರವನ್ನು ಮಾಡಿದರು. ಮಂಗಳವಾದ್ಯಗಳು ಭೋರ್ಗರೆದುವು.

ಅಲ್ಲಿ ಉಪಸ್ಥಿತರಾಗಿದ್ದವರು ತಂತಮ್ಮ ಅತ್ಯುತ್ತಮವಾದ ಕಾಣಿಕೆಗಳನ್ನು ತಂದು ವಿರೂಪಾಕ್ಷನಿಗೆ ಒಪ್ಪಿಸಿದರು. ವಿರೂಪಾಕ್ಷನು ನಮ್ರನಾಗಿ ಎದ್ದು ನೆರೆದಿದ್ದ ಗಣ್ಯರ, ಹಿರಿಯರ ಶುಭಾಶಯಗಳನ್ನೂ ಆಶೀರ್ವಾದಗಳನ್ನೂ, ಪಡೆಯುತ್ತಾ ಗುರುಹಿರಿಯರಿಗೆ ವಂದಿಸುತ್ತಾ ನಡೆದು ಪಟ್ಟದಾನೆಯನ್ನು ಏರಿದನು.

ಮಂಗಳವಾದ್ಯಗಳು ಭೋರ್ಗರೆಯುತ್ತಿದ್ದುವು. ನೃತ್ಯಗೀತಾದಿಗಳು ನಡೆಯುತ್ತಿದ್ದುವು. ಭಜನೆಸಂಕೀರ್ತನೆಗಳು ನಡೆಯುತ್ತಿದ್ದುವು. ವೇದಘೋಷಗಳು ಮೊಳಗುತ್ತಿದ್ದುವು. ಮೆರವಣಿಗೆಯು ಮಹಾವೈಭವದಿಂದ ಬಿಜಯಮಾಡಿತು. ಸಕಲ ಭೂಪಾಲರೂ ಮಂತ್ರಿ ವರ್ಗವೂ ಉತ್ಸವದಲ್ಲಿ ಕೂಡಿದ್ದರು. ಪಟ್ಟಣದ ಸ್ತ್ರೀಯರು ದಿವ್ಯಾಲಂಕಾರ ಭೂಷಿತರಾಗಿ ಮಹಾಸಂಭ್ರಮದಿಂದ ಉತ್ಸವದೊಡನೆ ಬರುತ್ತಿದ್ದರು. ಮುಂದೆ ಆಗಮಿಸಿದವರಿಗೆಲ್ಲ ಗೌರವದಿಂದ ಸತ್ಕರಿಸಿ ಅವರುಗಳನ್ನು ಅವರವರ ಸ್ಥಾನಗಳಿಗೆ ಬೀಳುಕೊಟ್ಟರು. 102 ಗೋತ್ರದ ವೈಶ್ಯರು ತಾವು ಕಾಶಿಗೆ ಹೋಗಿ ವಿಶ್ವೇಶ್ವರನ ದರ್ಶನ ಮಾಡಿದ ನೆನಪಿಗಾಗಿ 102 ಅಭವಲಿಂಗಗಳನ್ನು, ಒಂದು ಸುಮುಹೂರ್ತದಲ್ಲಿ, ನಗರದಲ್ಲಿ ಪ್ರತಿಷ್ಠೆ ಮಾಡಿದರು. ಈಗಲೂ ಸಹಾ ಆ ಹೆದ್ದಾರಿಯನ್ನು ಪ್ರಭುಲಿಂಗ ಬೀದಿ ಎಂದೇ ಅಲ್ಲಿನ ಜನರು ಕರೆಯುವರು. ಭಕ್ತಾದಿಗಳು ಬಹಳ ಶ್ರದ್ಧಾಭಕ್ತಿಗಳಿಂದ ಅಲ್ಲಿ ಅರ್ಚನೆ ನಡೆಸುವರು. ಅಲ್ಲಿನ ಜನಗಳ ಶ್ರದ್ಧಾಭಕ್ತಿಗಳಿಂದ "ಪೆನುಗೊಂಡೆ"ಯು ಒಂದು ಪುಣ್ಯಕ್ಷೇತ್ರವೆನಿದೆ.

ಹೀಗೆ ವಿರೂಪಾಕ್ಷನು ವೈಶ್ಯಕುಲದವರನ್ನು ವಿಹಿತಪ್ರೇಮದಿಂದ ರಕ್ಷಿಸುತ್ತಾ, ರಾಜ್ಯಭಾರವನ್ನು ನಿರ್ವಹಿಸಿದನು. ಮತ್ತು ಆ ಪೆನುಗೊಂಡೆಯಲ್ಲಿ ಶ್ರೀ ಜನಾರ್ದನ ಮತ್ತು ಕನ್ಯಕಾದೇವಿಯ ದೇವಸ್ಥಾನಗಳನ್ನು ರಚಿಸಿ ಅಲ್ಲಿ ಸಕಲವಿಧವಾದ ಅರ್ಚನೆಗಳನ್ನು ಯಥಾವಿಧಿಯಾಗಿ ನಡೆಸುತ್ತಾ, ತನ್ನ ಹಿರಿಯರಿಂದಲೂ, ಮತ್ತು ಗುರುವಾದ ಭಾಸ್ಕರಾಚಾರ್ಯರಿಂದಲೂ ಉಪದೇಶವನ್ನು ಪಡೆಯುತ್ತಾ, ಧರ್ಮದಿಂದಲೂ, ಪರಾಕ್ರಮದಿಂದಲೂ ರಾಜ್ಯವಾಳುತ್ತಾ ಸೌಖ್ಯವಾಗಿದ್ದನು.

# ಫಲಶ್ರುತಿ

ಈ ಪರಮಪವಿತ್ರವಾದ ಕನ್ಯಕಾಪರಮೇಶ್ವರಿ ದೇವಿಯು ಸಚ್ಚರಿತ್ರೆಯನ್ನು ಯಾರು ಭಕ್ತಿಯಿಂದ ಹೇಳುವರೋ ಹಾಗೂ ಕೇಳುವರೋ, ಅವರಿಗೆ ಸಕಲ ಭೋಗಭಾಗ್ಯಗಳೂ, ಧೈರ್ಯೋತ್ಸಾಹಗಳೂ ಉಂಟಾಗುವುವು. ದೇವಿಯನ್ನು ಅನವರತವೂ ಸ್ತುತಿಸುವ ಎಲ್ಲ ಜನರಿಗೂ ಒದಗಿರುವ ಆಪತ್ತುಗಳು ತೊಲಗಿ ಅವರಲ್ಲಿ ಭಕ್ತಿ ವೈರಾಗ್ಯಾದಿಗಳು ಉಂಟಾಗುವುವು.

ಕನ್ಯಕಾಪರಮೇಶ್ವರಿದೇವಿಯನ್ನು ಸ್ತುತಿಸಲು ಸಕಲ ಶ್ರೇಯಸ್ಸುಗಳೂ ಪ್ರಾಪ್ತವಾಗುವುವು. ಭಕ್ತಜನರ ಸಂಕಷ್ಟಗಳು, ಸೂರ್ಯೋದಯವಾಗಲು ಅಂಧಕಾರವು ನಾಶವಾಗುವಂತೆ, ತೊಲಗುವುವು. ಸರ್ವತೋಮುಖವಾದ ಕಾರ್ಯ ಸಿದ್ಧಿಯಾಗುವುದು. ಸಕಲಸಂಪತ್ತುಗಳೂ ಒದಗಿ ಜೀವನವು ಮಂಗಳಮಯ ವಾಗುವುದು.

ಈ ರೀತಿಯಾಗಿ ಶಾಲುಕಮುನಿಯು ಕನ್ಯಕಾಪರಮೇಶ್ವರಿ ದೇವಿಯ ಸಚ್ಚರಿತ್ರೆಯನ್ನು ಪೇಳಲು, ಅದನ್ನು ಮುಂದೆ ಮಹಾತಪಸ್ವಿಯಾದ ಸೂತಮುನಿಗಳು ಲೋಕಾನು- ಗ್ರಹಾರ್ಥವಾಗಿ ಶೌನಕಾದಿಗಳಿಗೆ ನೈಮಿಷಾರಣ್ಯದಲ್ಲಿ ಹೇಳಿದರು. ಅದನ್ನು ಆಲಿಸಿದ ಶೌನಕಾದಿಗಳು ಸೂತಮುನಿಯನ್ನು ಅಭಿವಂದಿಸಿ ತಾವು ಪರಿಶುದ್ಧರಾದೆವೆಂದು ಭಾವಿಸಿದರು.

# ಮಂಗಳ

ಸಚ್ಚಿದಾನಂದಸ್ವರೂಪಿಣಿಗೆ ಮಂಗಳವು। ನಿತ್ಯಕಲ್ಯಾಣ ಗುಣಮಣಿಗೆ ಮಂಗಳವು। ಶುಭವನ್ನು ಕೊಡುವವಳೂ, ವರವನ್ನು ನೀಡುವಳೂ ಆದ ತಾಯಿ ಕನ್ಯಕಾಪರಮೇಶ್ವರಿಗೆ ಮಂಗಳವು। ಪಣ್ಯವಂತನಾದ ಕುಸುಮಶ್ರೇಷ್ಠಿಯ ಮಗಳಿಗೆ ಮಂಗಳವು। ಲೋಕದಲ್ಲಿ ಪೂಜ್ಯಳೂ, ಪವಿತ್ರವಾದ ಚಾರಿತ್ರ್ಯವನ್ನುಳ್ಳವಳೂ ಆದ ದೇವಿಗೆ ಮಂಗಳವು। ವೈಶ್ಯಹೃದಯ ಕನ್ನೈದಿಲೆಯನ್ನು ಅರಳಿಸುವ, ಬೆಳೆಯುತ್ತಿರುವ ಸೌಂದರ್ಯ ಚಂದ್ರನೋಪಾದಿಯಲ್ಲಿರುವ, ಕನ್ಯಕಾಪರಮೇಶ್ವರಿ ದೇವಿಗೆ ಮಂಗಳವು॥

ರಾಗ: ಆನಂದ ಭೈರವಿ-ಝುಂಪೇತಾಳ

ಮಂಗಳಮೇ ಕನಕಾಂಬಾ ಜಯ ಮಂಗಳಮೆ ವಾಸವಾಂಬಾ। ಮಂಗಳಂ ಫಣಿವೇಣಿ ಮಂಗಳಂ ಶುಕವಾಣಿ। ಗಂಗಾಧರುನಿ ರಾಣಿ ಗೌರಿ ಕಲ್ಯಾಣಿ॥1॥ ಶುಕವಾಣಿ ಸರ್ವೇಶುರಾಣಿ ಮುಮ್ಮು ರಕ್ಷಿಂಚು ಪರಮಕಲ್ಯಾಣಿ। ಅಖಿಲಾಂಡ ಚರಿತ ನೀ ಪಾದಸೇವಕು। ಇಕನೈನ ವರಮುಲು ಇಚ್ಚಿ ರಕ್ಷಿಂಪವೆ॥2॥ ನೀರಜದಳ ನೇತ್ರೆ ವಿನವೇ। ಮೇಮು ಕೋರಿನ ವರಮುಲೀಯವೆ। ನೇರಮುಲೆಂಚಕ ವಾರಕನ್ನುಲ ಚೂಸಿ। ಮೇಮು ಕೋರಿನ ವರಮುಲು ಇಚ್ಚಿ ರಕ್ಷಿಂಪವೆ॥3॥ ಸಂತೋಷಮುನ ಮಮ್ಮು ಚೂಸಿ। ಮಾ ಚಿಂತಲುಪರಿಹರಿಂಚು। ಎಂತೈನ ನೀವೇ ಕನ್ನತಲ್ಲಿ ಎನುಚುನು। ಇಂತ ಪರಾಕೇಲ ಚೇಸೇವೆ ಈ ವೇಳ॥4॥

# ಆತ್ಮ ಬಲಿದಾನ ಮಾಡಿದವರು

ಶ್ರೀ ಕನ್ಯಕಾಪರಮೇಶ್ವರಿಯೊಂದಿಗೆ ಅಗ್ನಿಪ್ರವೇಶಮಾಡಿ, ಆತ್ಮಬಲಿದಾನದ ಮೂಲಕ ವೈಶ್ಯಕುಲವನ್ನು ಉದ್ಧಾರಮಾಡಿದ ದಂಪತಿಗಳ ಪುಣ್ಯ ನಾಮಾವಳಿ:

| | ಗೋತ್ರ | ಸತಿ | ಪತಿ |
|---|---|---|---|
| 1. | ಪ್ರಭಾತಸ | ಕುಸುಮಾಂಬ | ಕುಸುಮಶ್ರೇಷ್ಠಿ |
| 2. | ಅಗಸ್ತ್ಯಸ | ಅಭಿರಾಮಾಂಬ | ರಾಮಚಂದ್ರಾರ್ಯ |
| 3. | ಆತ್ರೇಯಸ | ಬ್ರಹ್ಮಾಂಬ | ಬಾಲಾರ್ಯ |
| 4. | ಅಚ್ಛಾಯನಸ | ರಾಜಮುಖಿ | ರಾಜಾರ್ಯ |
| 5. | ಉಗ್ರಸೇನಸ | ರಾಜ್ಯಲಕ್ಷ್ಮಿ | ದ್ರವಿಣರಾಜು |
| 6. | ಉತ್ಕೃಷ್ಟಸ | ಸಮದರ್ಶಿನಿ | ಸೋಮದಗುಪ್ತ |
| 7. | ಉತ್ತಮೌಜಸ | ಕೀರ್ತಿಕಾಮಾ | ಉತ್ಪಲಾಕ್ಷಗುಪ್ತ |
| 8. | ಋಷ್ಯಶೃಂಗಸ | ಭೀಮಾಂಬ | ಪೃಥುವೀಶಗುಪ್ತ |
| 9. | ಔಚಿಥ್ಯಸ | ಪುಷ್ಪಾಂಬ | ಭುವನಾಧಿಪಶ್ರೇಷ್ಠಿ |
| 10. | ಕಣ್ವಸ | ಚಿತ್ರಭಾಷಿಣಿ | ಚಿತ್ತಶುಭಗಶ್ರೇಷ್ಠಿ |
| 11. | ಕಂದರ್ಪಸ | ಬಾಲಾಮಣಿ | ಬಲದೇವಗುಪ್ತ |
| 12. | ಕಪಿಲಸ | ಪಲ್ಲವಾಂಬ | ಪಾಲಾಹ್ವಯ |
| 13. | ಕಪೀತಸ | ರಾಗಮಂಜರಿ | ರಾಗಾಖ್ಯಃ |
| 14. | ಕಾಶ್ಯಪಸ | ನಾರೀಮಣಿ | ನಾಗಾಖ್ಯ |
| 15. | ಕುತ್ಸಸ | ಧನಲಕ್ಷ್ಮಿ | ಧನದಗುಪ್ತ |
| 16. | ಕೌಂಡಿನ್ಯಸ | ರುಕ್ಮವತಿ | ಪಾವನಶ್ರೇಷ್ಠಿ |
| 17. | ಕೌಂತೇಯಸ | ಚಂದ್ರಮುಖಿ | ಪೂತಾತ್ಮ |

| | ಗೋತ್ರ | ಸತಿ | ಪತಿ |
|---|---|---|---|
| 18. | ಕೌಶಿಕಸ | ಧರ್ಮಾಂಬ | ಉತ್ತಮಾಹ್ವಯ |
| 19. | ಕೃಷ್ಣಸ | ಅಮೃತಭಾಷಿಣಿ | ಗೌತಮಗುಪ್ತ |
| 20. | ಗಾರ್ಗ್ಯಸ | ಪಲ್ಲವಾಂಬ | ಮಲ್ಲಾಖ್ಯಃ |
| 21. | ಗೈತ್ಸ್ನಮದಸ | ವಿಚಕ್ಷಣಾ | ದಕ್ಷಿಣಾಹ್ವಯ |
| 22. | ಗೋಪಕಸ | ಚಂದ್ರರೇಖಾ | ಶೃಂಗಗುಪ್ತ |
| 23. | ಗೌತಮಸ | ಜಾಹ್ನವಿ | ಜಾಮದಗ್ನಿಗುಪ್ತ |
| 24. | ಚಕ್ರಪಾಣಿಸ | ಕಳಾವತಿ | ಚಂದ್ರಾಖ್ಯಃ |
| 25. | ಚಾಮರ್ಷಣಸ | ನೀಡಾಂಬ | ನಂದಾಖ್ಯ |
| 26. | ಜಡಭರತಸ | ಪಲ್ಲವಪಾಣಿ | ವಲ್ಲಭಶ್ರೇಷ್ಠಿ |
| 27. | ಜುತುಕರ್ಣಸ | ಅನುಮಿತ | ಅನಂತಗುಪ್ತ |
| 28. | ಜಂಭಸೂದನಸ | ಪೂತಾಂಬ | ಭೋಗಾಖ್ಯಃ |
| 29. | ಜರತ್ಕಾರಸ | ವಿಮಲಾ | ಕಂಪಿಲಶ್ರೇಷ್ಠಿ |
| 30. | ಜಾಬಾಲಿಸ | ಅಭಿನವಾಂಬ | ಅಮಲಶ್ರೇಷ್ಠಿ |
| 31. | ಜಾಬ್ರಿ | ತಾರಕಾಂಬ | ವಾಮನಗುಪ್ತ |
| 32. | ಜೀವಂತಿಸ | ಕನಕಾಂಗಿ | ಕುಮುದಾರ್ಯ |
| 33. | ತರಣಿಸ | ಇಂದುಮುಖಿ | ವಿಂದಾಖ್ಯಃ |
| 34. | ತಿತ್ತಿರಿಸ | ಕಮಲಾದೇವಿ | ಗಜಸತ್ವ |
| 35. | ತ್ರಿಜಟಿಸ | ಚಂಚಲಾಕ್ಷಿ | ಪಾವನಗುಪ್ತ |
| 36. | ತೈತ್ರೇಯಸ | ಭ್ರಮರಾಂಬ | ದಂತುಗುಪ್ತ |
| 37. | ದಾಲ್ಭ್ಯಸ | ಮಂಜುವಾಣಿ | ಸುಂದರಶ್ರೇಷ್ಠಿ |
| 38. | ದೂರ್ವಾಸ | ಆರ್ಯಾಂಬ | ಮಲ್ಲಾಖ್ಯ |
| 39. | ದೇವರಾತಸ | ಕುಂದರದನ | ಗೋವಿಂದಗುಪ್ತ |
| 40. | ದೇವವಲ್ಕ್ಯಸ | ಅಬ್ಜಮುಖಿ | ಜಾಮದಗ್ನಿ |

| | ಗೋತ್ರ | ಸತಿ | ಪತಿ |
|---|---|---|---|
| 41. | ನಾರದಸ | ಕಮಲಾಕ್ಷಿ | ಸಮುದಾಖ್ಯಃ |
| 42. | ನೇತ್ರಪಾದಸ | ಧರಣೀದೇವಿ | ಕುಸುಮಶ್ರೇಷ್ಠಿ |
| 43. | ಪರಸ್ಪರಾಯಣಸ | ಹಲ್ಲಕಾಂಬ | ಪಾರ್ಥಿವಾರ್ಯ |
| 44. | ಪಲ್ಲವಸ | ಧನಲಕ್ಷ್ಮಿ | ಧನದಗುಪ್ತ |
| 45. | ಪವಿತ್ರಪಾಣಿಸ | ಲೋಲಾಂಬ | ಲೋಕಹ್ವಯ |
| 46. | ಪಾರಾಶರ್ಯಸ | ಕಮಲಾವತಿ | ಗೌರಖ್ಯಃ |
| 47. | ಪಿಂಗಳಸ | ಸೌದಾಮಿನಿ | ಬಂಬರಗುಪ್ತ |
| 48. | ಪುಂಡರೀಕಸ | ಚಂದ್ರಕಳ | ಚಂದ್ರಮೌಳಿಗುಪ್ತ |
| 49. | ಪೂತಿಮಾಷಸ | ತನುಮಧ್ಯ | ಧೃತಸತ್ವ |
| 50. | ಪೌಂಡ್ರಕಸ | ಸುದರ್ಶಿನಿ | ಸೌದಾಖ್ಯಃ |
| 51. | ಪೌಲಸ್ತ್ಯಸ | ಸುಬೋಧಿನಿ | ಸಿಂಹಸೇನಗುಪ್ತ |
| 52. | ಪ್ರಾಚೀನಸ | ಮೋಹಿನಿ | ಪವಿತ್ರಪಾಣಿಗುಪ್ತ |
| 53. | ಬೃಹದಶ್ವಸ | ಬಾಲಾಂಬ | ಜನಾರ್ದನಗುಪ್ತ |
| 54. | ಬೋಧಾಯನಸ | ದಂಡವತಿ | ಅಮೃತಶ್ರೇಷ್ಠಿ |
| 55. | ಭಾರದ್ವಾಜಸ | ಸಮಶೀಲ | ಸಕಲಾಖ್ಯಃ |
| 56. | ಭಾರ್ಗವಶ | ಚಿತ್ರರೇಖ | ಕುಶಲಶ್ರೇಷ್ಠಿ |
| 57. | ಮಂದಪಾಲ | ಭಾಮಾಮಣಿ | ಭಾಸ್ಕರಶ್ರೇಷ್ಠಿ |
| 58. | ಮಾನವಸ | ಮಣಿಮಂಜರಿ | ಆದಿತ್ಯಗುಪ್ತ |
| 59. | ಮರೀಚಸ | ಧನವತಿ | ಧರ್ಮಾಖ್ಯಃ |
| 60. | ಮಾರ್ಕಂಡೇಯಸ | ಶ್ಯಾಮಲಾಂಬ | ಕೃಷ್ಣಗುಪ್ತ |
| 61. | ಮುನಿರಾಜಸ | ಸರಸ್ವತಿ | ಸರಸಶ್ರೇಷ್ಠಿ |
| 62. | ಮೈತ್ರೇಯಸ | ಕಾಳಿ | ಕಾಲಕಂಠ |
| 63. | ಮೌಸಲ | ಹೇಮರೇಖ | ಸ್ವರ್ಣರಥ |

| | ಗೋತ್ರ | ಸತಿ | ಪತಿ |
|---|---|---|---|
| 64. | ಮೌಂಜಾಯನಸ | ಮಣಿಶಲಾಕ | ಕಂದರ್ಪಶ್ರೇಷ್ಠಿ |
| 65. | ಮೌದ್ಗಲ್ಯಸ | ಮೇಧಾಂಬ | ಮಾರ್ಕಂಡೇಯ |
| 66. | ಯಾಸ್ಕಸ | ಪೃಥ್ವಿದೇವಿ | ಪೃಥುನಾಮಗುಪ್ತ |
| 67. | ಯಾಜ್ಞವಲ್ಕ್ಯಸ | ಧನದಾಂಬ | ಮೂಲಾರ್ಯ |
| 68. | ವಟುಕಸ | ಪ್ರೋಲ್ಲಾಸಿನಿ | ಪುಣ್ಯರಾಶಿಗುಪ್ತ |
| 69. | ವರತಂತುಸ | ಬಿಂಬಾಧರಿ | ಪೀನವಕ್ಷ |
| 70. | ವರುಣಸ | ಪಲ್ಲವಾಂಬ | ಭೋಗಾಖ್ಯಃ |
| 71. | ವಶಿಷ್ಠಸ | ಹೇಮಾಂಗಿ | ಮತ್ಸ್ಯಧ್ವಜ |
| 72. | ವಾಮದೇವಸ | ದೇವಾಂಬ | ಭೋಗಾರ್ಯ |
| 73. | ವಾಸುದೇವಸ | ಇಭಯಾನ | ನಾಗಾರ್ಯ |
| 74. | ವಾಯವ್ಯಸ | ಭೂಮಾಂಬ | ಬ್ರಹ್ಮಾರ್ಯ |
| 75. | ವಾಲ್ಮೀಕಸ | ವಿದುರಾಂಬ | ಮಾಧವಶ್ರೇಷ್ಠಿ |
| 76. | ವಿಷ್ವಕ್ಸೇನಸ | ಸೋಮಪ್ರಭ | ಸಿಂಹಧ್ವಜ |
| 77. | ವಿಶ್ವಾಮಿತ್ರಸ | ಕಂಬುಕಂಠಿ | ಕಪಿಲಾರ್ಯ |
| 78. | ವಿಷ್ಣುವೃದ್ಧಸ | ವಾಸಂತಿಕ | ಅರ್ಧನಾರೀಶ |
| 79. | ವೈರೋಹಿತ್ಯಸ | ಪಿಪ್ಪಲಾಂಬ | ನಾಗಧ್ವಜ |
| 80. | ವ್ಯಾಸಸ | ಮಂಜುವಾಣಿ | ಗುಣಪುಂಜಗುಪ್ತ |
| 81. | ಶರಭಂಗಸ | ನೀಲವೇಣಿ | ಭಾನುಗುಪ್ತ |
| 82. | ಶಾಂರ್ಗರವಸ | ಕೃಷ್ಣಾಂಬ | ನಾಗಾರ್ಯ |
| 83. | ಶಾಂಡಿಲ್ಯಸ | ಪುಷ್ಪಧಾಮಾ | ವಿದ್ಯಾಖ್ಯಗುಪ್ತ |
| 84. | ಶ್ರೀವತ್ಸಸ | ಪ್ರಭಾವತಿ | ಪದ್ಮನಾಭಗುಪ್ತ |
| 85. | ಶ್ರೀಧರಸ | ನವನೀತಾಂಗಿ | ವಿನ್ನಾರ್ಯ |
| 86. | ಶುಕ್ಲಸ | ವಿನ್ನಾಂಬ | ವಿಶ್ವನಾಥಶ್ರೇಷ್ಠಿ |

| ಗೋತ್ರ | ಸತಿ | ಪತಿ |
|---|---|---|
| 87. ಶೌಚೀಯಸ | ವೇಧಾಂಬ | ವೀರಭದ್ರಗುಪ್ತ |
| 88. ಶೌನಕಸ | ಗಂಗಾಂಬ | ವಿದ್ಯಾಧರಗುಪ್ತ |
| 89. ಸತ್ಯಸ | ಚಿತ್ರಾಂಗಿ | ವಿಶ್ನಗುಪ್ತ |
| 90. ಸನಕಸ | ಸುಂದರಿ | ಜೀಮೂತಶ್ರೇಷ್ಠಿ |
| 91. ಸನತ್ಕುಮಾರಸ | ರಾಜಮುಖಿ | ರಾಜೇಶ್ವರಗುಪ್ತ |
| 92. ಸನಂದನಸ | ಉತ್ಪಲಾಕ್ಷಿ | ಪಾಂಡಿತಾರ್ಯ |
| 93. ಸಂವರ್ತಕಸ | ಪದ್ಮಗಂಧಿ | ಬಾಲಭಾನುಗುಪ್ತ |
| 94. ಸುಕಾಂಚನಸ | ಸತ್ಯವತಿ | ಸತ್ಯಸಂಧ |
| 95. ಸುತೀಕ್ಷ್ಣಸ | ಚಂದ್ರಾಂಬ | ಜಲದಾರ್ಯ |
| 96. ಸುಂದರಸ | ಪಾವನಿ | ಚಂದ್ರಬಾಣ |
| 97. ಸುವರ್ಣಸ | ಪದ್ಮಾಕ್ಷಿ | ಮೇಘಸೇನ |
| 98. ಸುಬ್ರಹ್ಮಣ್ಯಸ | ಚಪಲಾಕ್ಷಿ | ಸಿಂಹಮುಖ |
| 99. ಸೌಪರ್ಣಸ | ಮಣಿಮಾಲ | ಘನಮುಖ |
| 100. ಸೌಮ್ಯಸ | ದಾವನೀದೇವಿ | ನಿರ್ಜಲಸೇನ |
| 101. ಸೌವರ್ಣಸ | ಲೀಲಾವತಿ | ಜನಾರ್ದನಗುಪ್ತ |
| 102. ಹರಿವಲ್ಕ್ಯಸ | ಕುಮುದವಲ್ಲಿ | ಸುದರ್ಶನಶ್ರೇಷ್ಠಿ |

ಈ ಪುಣ್ಯಾನಾಮಾವಳಿಯನ್ನು ಓದಿ. ಧರ್ಮಕ್ಕಾಗಿ ಸರ್ವಸ್ವವನ್ನು ತ್ಯಾಗಮಾಡಿದ ನಮ್ಮ ಕುಲದ ಹಿರಿಯರನ್ನು ಸ್ಮರಿಸಿ ಧನ್ಯರಾಗೋಣ.